# ರೋಲ್ಸ್ ಮೇಷ್ಟ್ರು

(ಹಳೆಯ ಸ್ಕೂಲಿನ ನಾಟಕ)

ಎಂ. ಆರ್. ಶ್ರೀನಿವಾಸಮೂರ್ತಿ

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ಸಿಟಿ.

೧೯೪೭.

# ಮುನ್ನುಡಿ

ಹಳ್ಳಿಯ ಪ್ರಾಥಮಿಕ ಶಾಲೆಯ ಕೆಲವು ಸಮಸ್ಯೆಗಳನ್ನು ತಿಳಿಸುವುದಕ್ಕೋಸ್ಕರವಾಗಿ ಈ ಚಿಕ್ಕ ನಾಟಕವನ್ನು ಹಿಂದೆ ಪ್ರಕಟಿಸಲಾಯಿತು. ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋದ್ದರಿಂದ ಈಗ ಎರಡನೆಯ ಮುದ್ರಣಕ್ಕೆ ಅವಕಾಶವಾಗಿದೆ. ಕನ್ನಡಿಗರು ಈ ನಾಟಕವನ್ನು ಆದರದಿಂದ ಬರಮಾಡಿಕೊಂಡದ್ದಕ್ಕಾಗಿ ನಾನು ಅವರಿಗೆ ಬಹಳ ಕೃತಜ್ಞನಾಗಿದ್ದೇನೆ.

ಎಂ. ಆರ್. ಶ್ರೀ.

# ಪಾತ್ರಗಳು

ಮೊದಲನೆಯ ಉಪಾಧ್ಯಾಯರು
ರೋಲ್ಸ್ ಮೇಷ್ಟ್ರು
ಅಮಲ್ದಾರರು
ಇನ್ಸ್ಪೆಕ್ಟರುಗಳು
ರಾಮಣ್ಣಗೌಡ
ತಿಮ್ಮೇಗೌಡ
ಈರಣ್ಣಗೌಡ
ಕಾಡೇಗೌಡ
ಮತ್ತು ಇತರ ಜನರು, ಮಕ್ಕಳು

# ರೋಲ್ಸ್ ಮೇಷ್ಟ್ರು

——

## ದೃಶ್ಯ ೧

( ಹಳ್ಳಿಯ ಮುಂದೆ ಮುಖಂಡರು, ಉಪಾಧ್ಯಾಯ
ಮತ್ತು ಕೆಲವರು ಹುಡುಗರು )

**೧ ನೇ ಗೌಡ**

ಯಾಕಾ ಇನ್ನೂ ಇನ್‌ಚ್‌ಪೆಟ್ರು ಬರಲೇ ಇಲ್ಲ! ಹೇಳಿ ಬಂದ್ಯೋ ಇಲ್ಲೊ ?

**೨ನೇ ಗೌಡ**

ಹೇಳಿ ಬಂದಿನ್ನಿ. ಖಂಡಿತ ಬರ್ತೇನಪ್ಪ ಅಂತ ಮಾತು ಕೊಟ್ರು.

**೧ನೇ ಗೌಡ**

ಅಂತೂ ಇವರ ಕಾಲದಾಗೆ ಒಂದು ಇಸ್ಕೊಲ್ ಆಯ್ತಪ್ಪ ನಮ್ಮ ಹಳ್ಳಿಗೆ. ಒಳ್ಳೆ ಇನ್‌ಚ್‌ಪೆಟ್ರುಕಾಣಪ್ಪ. ಇದ್ಯೆ ಎಚ್ಚ ಬೇಕು, ನಮ್ಮ ಜನ ಮುಂದಕ್ಕೆ ಬರಬೋಕು, ಎಂತ ಒಂದು ದೊಡ್ಡ ಲೆಚ್ಚರ್ ಕೊಟ್ರಲ್ಲ.

**೨ನೇ ಗೌಡ**

ಊರಜನ ಎಲ್ಲ ಅರ್ಜಿ ಗುಜರಾಯಿಸಿ, ಕೇಳಿಕೊಳ್ಳೋ ಹೊತ್ತಿಗೆ ಆಯ್ತುಕಾಣಪ್ಪ.

### ೧ನೇ ಗೌಡ

ಲೋ! ಬರ್ತವ್ರೆಕಾಣೊ ರಸ್ತೇಲಿ ಸೈಕೋಲ್ ತುಳೀತಾ ಗಾಸಿ ಪಟ್ಕೊಂಡು. ಮೇಷ್ಟ್ರೇ, ಮೇಷ್ಟ್ರೇ, ಹೂವು ತಟ್ಟಿ ಕೊಡ್ರಲಾ.

### ೨ನೇ ಗೌಡ

ವಯಸ್ಸೇನಾಗಿಲ್ಲ ಕಾಣಪ್ಪ, ಇನ್ನೂ ಹುಡುಗರಿದ್ದಂಗವ್ರೆ.

### ೩ನೇ ಗೌಡ

ದೊಡ್ಡ ಪಾಸ್ ಮಾಡವ್ರೆಕಣೊ. ಮೈಸೂರಾಗೆ ಓದಿದವ್ರು. ನಮಸ್ಕಾರ ಸ್ವಾಮಿ! ನಮಸ್ಕಾರ!

(ಎಲ್ಲರೂ ನಮಸ್ಕರಿಸುವರು. ಇನ್‌ಸ್ಪೆಕ್ಟರ್ ಸೈಕಲ್ಲಿನಿಂದ ಇಳಿಯುವರು. ಅವರಿಗೆ ಹೂವಿನ ಹಾರ ಹಾಕಿ ನಿಂಬೇ ಹಣ್ಣು ಕೊಡುವರು.)

### ಇನ್‌ಸ್ಪೆಕ್ಟರ್

ಏನು ರಾಮಣ್ಣಗೌಡರೇ! ಅಂತೂ ನಿಮ್ಮ ಹಠ ಸಾಧಿಸಿಯೇ ಬಿಟ್ರಿ.

### ರಾಮಣ್ಣಗೌಡ

ಏನು ಸ್ವಾಮಿ ನನ್ನ ಹಠ. ತಾವು ಹಾಗೆ ಕೈಹಿಡಿದು ಶಿಫಾರಸುಮಾಡಿದಿರಿ. ದೊಡ್ಡ ಸಾಹೇಬರ ಹತ್ತಿರ ಓಟೆಲ್ಲ ಚರ್ಚೆ ಮಾಡ್ದಿರಿ. ಆಯ್ತು ಸ್ವಾಮಿ ಅಂತೂ ತಮ್ಮ ಕಾಲದಲ್ಲಿ ಒಂದಿ ಸ್ಕೂಲ್. ತಮ್ಮ ಹೆಸರು ಶಾಸನ ಆಗೋಯ್ತು. ನಮ್ಮ ಮಕ್ಕೆಲ್ಲ ವ್ಯೋಲಿ ಬೀಳೋದು ತಪ್ಪೋಯ್ತು.

ಇನ್‌ಸ್ಪೆಕ್ಟರ್

ಮೇಷ್ಟ್ರು ಬಂದಿದಾರೋ ?

೨ನೇ ಗೌಡ

ಇಗೋ ಸ್ವಾಮಿ ಇವರೇ ಮೇಷ್ಟ್ರು

( ಉಪಾಧ್ಯಾಯರು ಮತ್ತೊಮ್ಮೆ ನಮಸ್ಕರಿಸುವರು )

ಇನ್‌ಸ್ಪೆಕ್ಟರ್

ಏನ್ರಿ ನಿಮಗೆ ಟ್ರೈನಿಂಗ್ ಆಗಿದೆಯೋ ?

ಮೇಷ್ಟ್ರು

ಆಗಿದೆ ಸ್ವಾಮಿ.

ಇನ್‌ಸ್ಪೆಕ್ಟರ್

ಎಲ್ಲಾಯ್ತು ?

ಮೇಷ್ಟ್ರು

ಬೆಂಗಳೂರು ನಾರ್ಮಲ್ ಸ್ಕೂಲ್ ಸ್ವಾಮಿ. ತಾವೂ ಅಲ್ಲಿಗೆ ಬಂದು ಒಂದು ದಿನ ಲೆಕ್ಚರ್ ಕೊಟ್ಟರಿ.

ಇನ್‌ಸ್ಪೆಕ್ಟರ್

ಆಗ ನೀವು ಅಲ್ಲಿದ್ದಿರೋ ?

ಮೇಷ್ಟ್ರು

ಹೌದು ಸ್ವಾಮಿ.

ಇನ್ಸ್‌ಪೆಕ್ಟರ್

ಕಲಿತದ್ದೆಲ್ಲ ಅಲ್ಲೆ ಗುರುದಕ್ಷಿಣೆ ಒಪ್ಪಿಸಿ ಬಂದಿದ್ದೀರೋ?

ಮೇಷ್ಟ್ರು

ಇಲ್ಲ ಸ್ವಾಮಿ. ಪುಸ್ತಕ ನೋಟ್ಸು ತಂದಿದ್ದೇನೆ.

ಇನ್ಸ್‌ಪೆಕ್ಟರ್

ಒಳ್ಳೇದು. ರಾಮಣ್ಣಗೌಡರೆ! ಒಳಗೆ ಹೋಗೋಣ ನಡೆಯಿರಿ.

( ಪೂಜೆ---ಇತ್ಯಾದಿ )

ಇನ್ಸ್‌ಪೆಕ್ಟರ್

ಪ್ರಾರ್ಥನೆ ಯಾರು ಮಾಡುತ್ತಾರೆ?

( ಇಬ್ಬರು ಹುಡುಗರು ಮುಂದೆ ಬಂದು 'ಕಾಯಾ ಶ್ರೀಗೌರಿ' ಆರಂಭಿಸುವರು. ಹುಡುಗರನ್ನು ತಡೆದು )

ಮೇಷ್ಟ್ರೆ! ಇದು ಮೊದಲಲ್ಲಿ ಹೇಳೋದಲ್ಲ. ಕಡೆಯಲ್ಲಿ ಹೇಳಬೇಕು.

ರಾಮಣ್ಣಗೌಡ

ಸ್ವಾಮಿ! ಹಿಂದಿನ ಸ್ಕೂಲಿನಲ್ಲಿ ಹೇಳಿಕೊಟ್ಟಿದ್ದ ಪ್ರಾರ್ಥನೆ.

ಇನ್ಸ್‌ಪೆಕ್ಟರ್

ಮೇಷ್ಟ್ರೇ, ಅದು ಮೊದಲಲ್ಲಿ ಬೇಡ, ಬೇರೆ ಹೇಳಿಸಿ.

(ಹುಡುಗರು ತಬ್ಬಿಬ್ಬಾಗುವರು)

ಮೇಷ್ಟ್ರೆ! ನೀವೇ ಪ್ರಾರ್ಥನೆ ಹೇಳಿ. ಬರುತ್ತದೋ ಇಲ್ಲವೋ?

**ಮೇಷ್ಟ್ರು**

(ಸ್ವಲ್ಪ ಗಾಬರಿಯಿಂದ)

ಬರುತ್ತದೆ ಸ್ವಾಮಿ.

**ಇನ್‌ಸ್ಪೆಕ್ಟರ್**

ಹೇಳಿ, ಹೇಳಿ, ಹೊತ್ತಾಯಿತು.

**ಮೇಷ್ಟ್ರು**

ಥಟ್ಟನೇ ಜ್ಞಾಪಕಕ್ಕೆ ಬರೋದಿಲ್ಲ. ಅಂತೂ ಹೇಳುತ್ತೇನೆ ಸ್ವಾಮಿ.

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜವಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಶ್ರೀವನಿತೆಯರಸನೆ ವಿಮುಲ ರಾ
ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಕರ ದಾತಾರ ।
ರಾವಣಾಸುರಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ ॥

(ಹುಡುಗರಿಂದ ಸ್ವಲ್ಪ ಆಟ)

## ರಾಮಣ್ಣಗೌಡ

( ಓದುವನು )

ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ ಮೆಹರ್ಬಾನ್ ಹೊಸಮಂಗಲದ ರೇಂಜ್ ಅಸಿಸ್ಟೆಂಟ್ ಇನ್ಸ್ಪೆಕ್ಟರ್ ಸಾಹೇಬರ ಹುಜೂರು ಜನಾಬಿನಲ್ಲಿ ಅತ್ತಿಸಂದ್ರದ ಪಂಚಾಯಿತಿ ಮೆಂಬರುಗಳು ಮತ್ತು ಗ್ರಾಮಸ್ಥರು ಕೃತಜ್ಞತೆಯಿಂದ ಒಪ್ಪಿಸಿದ ಬಿನ್ನವತ್ತಳೆ :

ಸ್ವಾಮಿ,

ನಮ್ಮೂರ ಜನಸಂಖ್ಯೆ ೫೦೦ಕ್ಕೆ ಮೇಲ್ಪಟ್ಟಿದ್ದರೂ ಇದು ವರೆಗೂ ಸರ್ಕಾರದವರು ನಮಗೊಂದು ಸ್ಕೂಲು ದಯಪಾಲಿಸಿರಲಿಲ್ಲ. ನಾವು ಸೆಸ್ ಹಣ ಪ್ರತಿವರ್ಷ ಕಟ್ಟಿ ಕಟ್ಟಿ ಅರ್ಜಿ ಹಾಕಿ ಹಾಕಿ ಸಾಕಾಯ್ತು. ಕಡೆಗೆ ತಮ್ಮ ಸಹಾಯದಿಂದ ನಮಗೊಂದು ಸ್ಕೂಲು ದೊರೆಯಿತು. ಇದಕ್ಕಾಗಿ ನಾವೆಲ್ಲ ತಮಗೆ ಕೃತಜ್ಞರಾಗಿದ್ದೇವೆ (ಚಪ್ಪಾಳೆ, ನಮಸ್ಕಾರಗಳು). ಸರ್ಕಾರ ನಮಗೆಲ್ಲ ತಾಯಿ ತಂದೆ. ನಮಗೆ ವಿದ್ಯೆ ಬುದ್ಧಿ ಹೇಳಿಕೊಟ್ಟು ಹೊಟ್ಟೆಗೆ ಹಿಟ್ಟು ಕಾಣಿಸೊ ಜವಾಬ್ದಾರಿ ಸರ್ಕಾರದ್ದು ಸ್ವಾಮಿ. ನಾವು ಬಡರೈತರು. ಆದರೂನೂವೆ ಸ್ಕೂಲಿಗೆ ತಕ್ಕ ಕಟ್ಟಡ ಇನ್ನೊಂದು ವರ್ಷದೊಳಗಾಗಿ ನಮ್ಮ ಸ್ವಂತ ಲಾಗೋಡಿನಿಂದ ಕಟ್ಟಿಸಿಕೊಡುತ್ತೇವೆ ಸ್ವಾಮಿ.

ಈ ಊರಿನಲ್ಲಿ ಬಹಳ ಜನ ಮಕ್ಕಳಿದ್ದಾರೆ. ಈಗಾಗಲೆ ಮೂವತ್ತೈದು ಮಕ್ಕಳು ಸೇರಿದ್ದಾರೆ. ಇನ್ನೂ ಸೇರುವ ಹುಡುಗರು ಬಹಳ ಇದ್ದಾರೆ. ಆದ್ದರಿಂದ ತಾವು ದಯವಿಟ್ಟು ಇನ್ನೊಬ್ಬರು ಮೇಷ್ಟರನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇವೆ ಸ್ವಾಮಿ.

ನಮಗೆ ಆಗಾಗ ತಿಳಿವಳಿಕೆ ಕೊಟ್ಟು ನಮ್ಮ ಮಕ್ಕಳಿಗೆ ವಿದ್ಯೆ ಹೇಳಿಕೊಟ್ಟು ಮುಂದಕ್ಕೆ ತರೋ ಭಾರ ತಮ್ಮದೇ ಆಗಿದೆ ಸ್ವಾಮಿ. ( ಚಪ್ಪಾಳೆ )

( ಬಿನ್ನವತ್ತಳೆ ಒಪ್ಪಿಸುವನು )

## ಇನ್‌ಸ್ಪೆಕ್ಟರ್

ಈ ಊರಿನಲ್ಲಿ ಪಾಠಶಾಲೆ ಪ್ರಾರಂಭ ಮಾಡುವ ಈ ಉತ್ಸವದಲ್ಲಿ ಭಾಗಿಯಾಗಲು ಬಹಳ ಸಂತೋಷವಾಗುತ್ತದೆ. ಮುಖ್ಯವಾಗಿ ವಿದ್ಯೆ ಎಲ್ಲ ಜನರಿಗೂ ಬೇಕು. ಪಾಶ್ಚಾತ್ಯ ದೇಶಗಳಲ್ಲಿ ೧೦೦ಕ್ಕೆ ೯೬-೯೮ ಮಂದಿ ಓದುಬರೆಹ ತಿಳಿದವರಿದ್ದಾರೆ. ನಮ್ಮ ದೇಶದಲ್ಲಿ ೧೩ ಮಂದಿಯೂ ಇಲ್ಲ. ಆದ್ದರಿಂದ ಗ್ರಾಮಸ್ಥರು ಪಾಠಶಾಲೆಯಿಂದ ಹೆಚ್ಚು ಪ್ರಯೋಜನ ಪಡೆಯಬೇಕು. ಸ್ಕೂಲಿಗೆ ಸರಿಯಾಗಿ ಮಕ್ಕಳನ್ನು ಕಳುಹಿಸಬೇಕು. ಅವರನ್ನು ಚೊಕ್ಕಟವಾಗಿ ಕಳುಹಿಸಿಕೊಡಬೇಕು. ಸ್ಲೇಟು ಪುಸ್ತಕ ಅವರಿಗೆ ತೆಗೆದುಕೊಡಬೇಕು. ಮೇಷ್ಟರಿಗೆ ಮನೆ ಮಾಡಿಕೊಟ್ಟು ಆದರದಿಂದ ನೋಡಿಕೊಳ್ಳಬೇಕು. ಈ ದಿನ ನಿಮಗೆಲ್ಲ ಇರುವ ಉತ್ಸಾಹ ತಗ್ಗದೆ ಕೊನೆತನಕ ಇರಬೇಕು. ಕಟ್ಟಡವನ್ನು ಬೇಗ ಮಾಡಿಕೊಡೋದು ಒಳ್ಳೆಯದು. ಈಗಿನ್ನೂ ಪಂಚಾಯಿತಿಕಟ್ಟಡ ಪೂರೈಸಿಲ್ಲ. ಅದು ಮುಗಿದಮೇಲೆ ಸ್ಕೂಲನ್ನು ಅಲ್ಲಿ ಮಾಡಿಕೊಳ್ಳಬಹುದು. ಈಗ ಸದ್ಯಕ್ಕೆ ರಾಮಣ್ಣಗೌಡರು ಸ್ಕೂಲಿಗಾಗಿ ತಮ್ಮ ಮನೆ ಭಾಗವನ್ನು ಬಿಟ್ಟುಕೊಟ್ಟಿರುವುದಕ್ಕಾಗಿ ನೀವುಗಳೆಲ್ಲ ಅವರಿಗೆ ಕೃತಜ್ಞರಾಗಿರಬೇಕು ( ಚಪ್ಪಾಳೆ ). ಇನ್ನೊಬ್ಬರು ಮೇಷ್ಟ್ರು ಹೆಚ್ಚಾಗಿ ಬೇಕು ಎಂದು ಹೇಳಿದ್ದೀರಿ. ಹುಡುಗರು ಸರಿಯಾಗಿ ಬರುತ್ತಾ ಹಾಜರಿ ಸಂಖ್ಯೆ ಹೆಚ್ಚಿದರೆ ಖಂಡಿತ ಮತ್ತೊಬ್ಬ

ಮೇಷ್ಟ್ರನ್ನು ಕೊಡುತ್ತೇವೆ. ಸ್ಕೂಲು ವಿಚಾರದಲ್ಲಿ ಮುತುವರ್ಜಿ ವಹಿಸಿ ಗ್ರಾಮಸ್ಥರು ಅದನ್ನು ಏಳಿಗೆಗೆ ತಂದು ತಾವೂ ಏಳಿಗೆಗೆ ಬರಬೇಕೆಂಬುದೇ ನನ್ನ ಕೋರಿಕೆ. (ಚಪ್ಪಾಳೆ)

(ಹೂವು ಗಂಧ ವಿನಿಯೋಗ)

## ದೃಶ್ಯ ೨

(ಮೂರು ವರ್ಷಗಳ ತರುವಾಯ)

(ಉಪಾಧ್ಯಾಯರು ಹಾಜರಿಯನ್ನು ಗುರುತಿಸಿ, ಬಂದಿರುವ ೯–೧೦ ಮಕ್ಕಳನ್ನು ನೋಡಿ ನಿಟ್ಟುಸಿರುಬಿಡುವರು)

### ಉಪಾಧ್ಯಾಯ

ಎಷ್ಟು ಹೇಳಿದರೂ ಮಕ್ಕಳನ್ನು ಸ್ಕೂಲಿಗೇ ಕಳಿಸೋದಿಲ್ಲ. ಪಟೇಲ, ಶಾನುಭೋಗ, ಪಂಚಾಯಿತಿ ಮೆಂಬರು, ಯಾವ ಯಾವ ಮಹಾರಾಯನಿಗೆ ಮೊರೆಯಿಟ್ಟರೂ "ಅಂಗೇ ನಡ್ಸಿಕೊಂಡು ಹೋಗು, ಸ್ಕೂಲು ಬಾಕ್ಲು ಮಾತ್ರ ಮುಚ್ಚಬೇಡ" ಎನ್ನುತ್ತಾರೆ. ಹುಡುಗರನ್ನ ಕೂಡಹಾಕೋದರಲ್ಲೇ ಎಂಟು ಗಂಟೆ ಆಗೋದ್ರೆ ಈಗ ಬಂದಿರೊ ಇನ್‌ಸ್ಪೆಕ್ಟರು ಯಾವಾಗ ತಲೆಹಾಕಿ ಜುಲ್ಮಾನೆ ಎಳೀತಾರೊ ಕಾಣೆ. ದಿನ ದಿನಕ್ಕೂ ರೂಲ್ಸ್ ಬೇರೆ ಬಿಗಿ ಆಗೋಯ್ತು. ರೂಲ್ಸ್ ನಡ್ಸಿದರೆ ಹಳ್ಳಿಯವರು ಮೇಲ್‌ಬೀಳ್ತಾರೆ. ನಡ್ಸದಿದ್ದರೆ ಇನ್‌ಸ್ಪೆಕ್ಟರು 'ಸಸ್ಪೆಂಡ್ ಡಿಸ್‌ಮಿಸ್' ಅಂತ ಹಾರಾಡ್ತಾರೆ. ಅತ್ತ ದರಿ, ಇತ್ತ ಹುಲಿ, ಏನು ಮಾಡಲಿ ನಮ್ಮಪ್ಪ, ದೇವರೇ!

( ಪ್ರವೇಶ ತಿಮ್ಮೇಗೌಡ ಇಬ್ಬರು ಮಕ್ಕಳೊಡನೆ )

### ತಿಮ್ಮೇಗೌಡ

ಸೋಮಿ, ಸೇರಿಸಿಕೊಳ್ರಿ ಈ ಹೈಕಳ್ನ.

### ಉಪಾಧ್ಯಾಯ

ಈಗಾಗೋದಿಲ್ಲಪ್ಪ. ಎರಡು ತಿಂಗಳಾಯ್ತು ಸ್ಕೂಲು ತೆರೆದು. ಈಗ ಸೇರಿಸುವುದಕ್ಕೆ ರೂಲ್ಸಿಲ್ಲ. ಎಷ್ಟು ನೋಟೀಸ್ ಕೊಟ್ಟರೂ, ಎಷ್ಟು ಬಾರಿ ಕೇಳಿಕೊಂಡರೂ ಹುಡುಗರನ್ನ ತಂದು ಸೇರಿಸಲಿಲ್ಲ. ಈಗ ವಾಯಿದೆ ಮೀರೋಯ್ತು. ಈಗ ದಾಖಲ್ಮಾಡಿ ದರೆ ಇನ್‌ಸ್ಪೆಕ್ಟರವರು ನನ್ನ ಮನೇಗೆ ಕಳಸ್ತಾರೆ.

### ತಿಮ್ಮೇಗೌಡ

ಅದ್ಯಾಕೆ ಕಳ್ಸತಾರ ? ನಮ್ಮಿಸ್ಕೋಲಲ್ವಾ ! ನಮ್ಮಕ್ಕಳ್ಗೆ ಇದ್ಯೆ ಹೇಳ್ಕೊಡಬೇಕಾ ಬೇಡ್ವಾ ?

### ಉಪಾಧ್ಯಾಯ

ವಾಯಿದೆ ಆಗೋಯ್ತಪ್ಪ. ಈಗ ನೀನು ಹೋಗು. ತಿಂಗಳ ಹಿಂದೆ ಸೇರಿಸಬೇಕಾಗಿತ್ತು.

### ತಿಮ್ಮೇಗೌಡ

ಆಂಗೈತಾ ನಿಮ್ಮ ರೋಲ್ಸು. ಇಸ್ಕೋಲಿಗೆಂತಾ ರೋಲ್ಸು ! ಇದೇನ್ ಧಂಡು ಕೆಟ್ಟೋಯ್ತಾ !

### ಉಪಾಧ್ಯಾಯ

ಆಗೋದಿಲ್ಲಪ್ಪಾ ಅಂದ್ರೆ ಆಗೋದಿಲ್ಲ. ಹುಡುಗರ್ನ ಕರಕೊಂಡು ಹೋಗು. ನಾನು ಪಾಠ ಮಾಡಬೇಕು.

### ತಿಮ್ಮೇಗೌಡ

ಏ! ಎದ್ದೋಗತ್ತ! ಸೇರಿಸ್ತೀಯೋ ಇಲ್ವೋ? ಕೈಕಾಲು ಮುರಿದುಬಿಟ್ಟೇನು. ನಿನ್ ಇನ್‌ಚ್‌ಪೆಟ್ರು ಗಿನ್‌ಚ್‌ಪೆಟ್ರು, ಈ ಹಳ್ಳಾಗೆ ಏನ್ ನಡೀತೈತೆ ಅವರ ರೋಲ್ಸು. ನೀನು ಇಸ್ಕೋಲೇ ಮಾಡ್ತಿಲ್ಲ ಅಂತ ಅರ್ಜಿ ಗುಜರಾಯಿಸ್ತೇನೆ ನೋಡು.

### ಉಪಾಧ್ಯಾಯ

ಹಾಗೆಲ್ಲ ಮಾಡ್ಬೇಡ ನಮ್ಮಪ್ಪ, ತಣ್ಣೀರಾರಿಸಿಕೊಂಡು ಕುಡಿಯೋ ಕಾಲ.

### ತಿಮ್ಮೇಗೌಡ

ಅಂಗ್ ದಾರೀಗ್ ಬಾ. ಏನೋ ರೋಲ್ಸಂತೆ ಗೀಲ್ಸು. ಹಳ್ಳೀಜನಾ ಏನೂ ಗೊತ್ತಿಲ್ಲಾಂತ ನನ್ತಾವ ರೋಲ್ಸ್ ಆಡ್ತವ್ನೆ. ನಾನೆಲ್ಲ ಕಂಡಿವ್ನಿ. ಬೋರ್ಡ್ ನಂಬರಾಗಿ ಸರಿಗೆರುಮಾಲ ಸುತ್ತಿ ನಾನೂವೆ ಊರ್ಪೇಟಿ ಕಂಡಿವ್ನಿ! ದುಪಟಿಕಮಿಸರ್ ತಾವ ಕುರ್ಚಿ ಮೇಲ್ ಕುಂತಿವ್ನಿ! ನನ್ತಾವ ರೋಲ್ಸ್ ಆಡ್ತವ್ನೆ ಮೇಷ್ಟ್ರು!

(ಹುಡುಗರನ್ನು ಬಿಟ್ಟುಹೋಗುವನು. ಉಪಾಧ್ಯಾಯರು ಪಾಠ ಮಾಡುತ್ತಿರುವರು. ಹಳ್ಳಿಯ ಹೆಂಗಸು ಪ್ರವೇಶ)

## ಹೆಂಗಸು

ಸೋಮಿ, ಮಗನ್ನ ತಂಗಳೂಟಕ್ಕೆ ಕಳಸ್ರಲಾ.

## ಉಪಾಧ್ಯಾಯ

ಹಾಗೆಲ್ಲ ಮಧ್ಯೇ ಕಳಿಸೋದಕ್ಕೆ ರೂಲ್ಸಿಲ್ಲ. ಮೊದಲೇ ಊಟ ಹಾಕಿ ಕಳಿಸಬೇಕೋ ಬೇಡವೋ? ಒಂಬತ್ತು ಗಂಟೆಗೆ ಬಿಡುತ್ತೇನೆ ಹೋಗು.

## ಹೆಂಗಸು

ಆಗಾಕಿಲ್ಲ ಸೋಮಿ ಹಸಿದುಕೊಂಡವ್ನೆ. ಬಾರೋ ಮಗ.

(ಹುಡುಗನೂ ಹೆಂಗಸೂ ಹೊರಟುಹೋಗುವರು.
ಇಬ್ಬರು ಗೌಡರು ಸಣ್ಣ ಮಕ್ಕಳೊಡನೆ ಪ್ರವೇಶ)

## ೧ ನೇ ಗೌಡ

ಈ ಮಕ್ಕಳ್ಗೆ ಸೇರಿಸಿಕೊಳ್ರಿ ಮೇಷ್ಟ್ರೆ.

## ಉಪಾಧ್ಯಾಯ

ಇವರಿಗಿನ್ನೂ ವಯಸ್ಸಾಗಿಲ್ಲ; ಆರು ವರ್ಷ ಆದರೂ ಆಗಿರ ಬೇಕು ಅಂತ ರೂಲ್ಸಿದೆ.

## ೨ನೇ ಗೌಡ

ಆಗಯ್ತೆ ಮೇಷ್ಟ್ರೇ! ನೋಡಾಕೆ ಅಂಗವ್ನೆ. ಇವನು ಹುಟ್ಟೆ ಓಟೊರಸ ಆಗೋಯ್ತೋ!

ಉಪಾಧ್ಯಾಯ

ಸೇರಿಸೋದಕ್ಕಾಗೋದಿಲ್ಲ. ಮೂರು ವರ್ಷದವರನ್ನೆಲ್ಲ ಕೂಡಿಸಿಕೊಂಡು ನಾನೇನುಮಾಡಲಿ !

೧ನೇ ಗೌಡ

ಮನೇಲಿ ಬಲ್ ಕಾಟಾ ಕೊಡ್ತಾವೆ ಮೇಷ್ಟ್ರೆ. ಗಡಿಗೆಪಡಿಗೆ ಯೆಲ್ಲಾ ಉರುಳಿಸಿ ರಾಗಿಹಿಟ್ಟೆಲ್ಲ ಚೆಲ್ಲಿ ದಾಂದಲೆ ಮಾಡ್ತಾವೆ. ಇಲ್ಲೇ ಕೂಡ್ಸಿಕೊಂಡು ಎರಡಚ್ಚರ ಹೇಳಿಕೊಡ್ರಲಾ.

೨ನೇ ಗೌಡ

ಸುಂಕೆ ಕುಂತಿರ್ಲೇಳು, ನಿನ್ ಗಂಟೇನ್ ಹೋಗ್ತೈತೆ ! ಪಂಚಾಯ್ತಿ ಕಟ್ಟಡ ಇಸಾಲಾಗಯ್ತೇ.

ಉಪಾಧ್ಯಾಯ

ದೊಡ್ಡ ಹುಡುಗರನ್ನ ಕಳಿಸಿರಪ್ಪಾ ಎಂದರೆ, ಕೆಲಸಕ್ಕೆ ಬೇಕೂ ಅಂತ ಮಡಕ್ಕೋತೀರಿ. ಈ ಚಿಳ್ಳೆ ಪಿಳ್ಳೆ ಎಲ್ಲಾ ತಂದು ನನ್ನ ತಲೇಗೆ ಕಟ್ಟಿ ಹೋಗ್ತೀರಿ. ಇವಕ್ಕೇನು ಪಾಠ ಹೇಳಲಿ ನಮ್ಮಪ್ಪ !

೧ ನೇ ಗೌಡ

ಏನಾದ್ರು ಆಡಲಿಕ್ಕೊಡು. ಆ ಬಣ್ಣ ಬಣ್ಣ ದ ಮಣಿ ಚೌಕಟ್ಟು ಕೊಟ್ರೆ ಆಡ್ಕೋತಾ ಕುಂತ್ಕೊಳ್ತವೆ.

### ಉಪಾಧ್ಯಾಯ

ಇನ್‌ಸ್ಪೆಕ್ಟರ್ ಬಂದರೆ ನನ್ನ ಸಸ್ಪೆಂಡ್ ಮಾಡಿಬಿಡ್ತಾರಲ್ಲಪ್ಪ. "ಸ್ವಾಮಿ, ಹಳ್ಳಿ ಸ್ಕೂಲಿಗೆ ರೂಲ್ಸು ನಡಿಯೋದಿಲ್ಲ" ಎಂದು ಎಷ್ಟೋ ಹೇಳಿದೆ, ಅವರು ಕೇಳಲಿಲ್ಲ. ಸರ್ಕ್ಯುಲರ್ ಮೇಲೆ ಸರ್ಕ್ಯುಲರ್ ಕಳ್ಸುತಾರೆ. ಅದರಂತೆ ನಡೆಯದಿದ್ರೆ 'ಜುಲ್ಮಾನೆ, ಸಸ್ಪೆಂಡ್' ಅಂತಾರೆ. ನಿಮ್ಮ ಹತ್ತಿರ ಹೇಳ್ಕೊಂಡ್ರೆ ಸುಂಕದವನ ಹತ್ತಿರ ಸುಖದುಃಖ ಹೇಳಿಕೊಂಡ ಹಾಗೆ.

### ೨ನೇ ಗೌಡ

ಇರಲಿ ಮೇಷ್ಟ್ರೆ. ಇನ್‌ಚ್‌ಪೆಟ್ರ ನಾವು ಕಾಣ್ತಾ. ಇನ್‌ಚ್‌ಪೆಟ್ರು ಬರ್ಲಿ, ನಾವೆಲ್ಲ ಹೇಳ್ತೀವಿ.

(ಮಕ್ಕಳನ್ನು ಬಿಟ್ಟುಹೋಗುವರು. ಉಪಾಧ್ಯಾಯರು ಪಾಠ ಮಾಡುತ್ತಿರುವರು. ಹಳ್ಳಿಯ ಹೆಂಗಸು ಪ್ರವೇಶ)

### ಹೆಂಗಸು

ಸೋಮಿ, ಮಕನ್ನ ಸ್ವಲ್ಪ ಕಾಪೀಗೆ ಕಳಿಸ್ರಲಾ.

### ಉಪಾಧ್ಯಾಯ

ಕಾಫಿ! ಹಳ್ಳ್ಯಾಗೇನು ಕಾಫಿ!

### ಹೆಂಗಸು

ಇವತ್ತು ಮಾಡಿವ್ನಿ. ಬಿರಾಮ್ರೆಲ್ಲ ಕುಡಿತಾರ, ನನ್ಗೂವೆ ಮಾಡಿಕೊಡು ಅಂತ ಆಟ ಮಾಡತಿದ್ದ ಮಕ. ನಾನೂವೆ ಒಸಿ ಮಾಡಿವ್ನಿ. ಕಳ್ಸಿಕೊಡ್ರಲಾ.

**ಉಪಾಧ್ಯಾಯ**

ಹಾಗೆಲ್ಲ ಮಧ್ಯೇ ಕಳಿಸಬಾರದು. ಪಾಠ ಹೋಗುತ್ತೆ, ರೂಲ್ಸು ಮೀರೋದಕ್ಕಾಗೋದಿಲ್ಲ.

**ಹೆಂಗಸು**

ನಮ್ಕೇನ್ ತಿಳೀತೈತೆ ರೋಲ್ಸು, ಕಳ್ಸಿಕೊಡಿ ಸೋಮಿ. ಆ ಮಕ ಓದಿ ಏನ್ ದಿವಾನ್‌ಗಿರಿ ಮಾಡ್ತೈತ.

**ಉಪಾಧ್ಯಾಯ**

ಕರಕೊಂಡು ಹೋಗು, ಬೇಗ ವಾಪಸ್ ಕಳಿಸಿಕೊಡು.

( ಹುಡುಗ ಹೆಂಗಸು ಹೊರಟುಹೋಗುವರು )

ಮಧ್ಯೇ ಮಧ್ಯೇ ಹುಡುಗರನ್ನ ಕರೆದುಕೊಂಡು ಹೋಗ್ತಾರೆ. ಒಂಬತ್ತು ಗಂಟೆಗೆ ವಿರಾಮ ಅಂತ ಬಿಟ್ಟರೆ ಹಾಗೇನೇ ಹೊರಟು ಹೋಗ್ತಾರೆ, ಪುನಃ ಬರೋದೇ ಇಲ್ಲ. ಪಾಠ ಸರಿಯಾಗಿ ನಡೆಯೋದಿಲ್ಲವಲ್ಲ.

( ಇಬ್ಬರು ಯುವಕರ ಪ್ರವೇಶ. ಒಬ್ಬನು ಉಪಾಧ್ಯಾಯರ ಬೈಸಿಕಲ್ಲಿಗೆ ಕೈಹಾಕುವನು )

ಏ ! ಭೀಮಪ್ಪ ನನ್ನ ಸೈಕಲ್ ಮಡಗಲ್ಲಿ. ಇದೇ ಆಗೋಯ್ತು. ಬೇಡ ಬೇಡ ಎಂದರೂ ಎತ್ತಿಕೊಂಡೋಗೋದು. ಹಳ್ಳದಲ್ಲಿ ಕೊಳ್ಳದಲ್ಲಿ ಕೆಡವಿ ಮುರಿದು ತಂದಿಡೋದು. ಮೊನ್ನೆಯೆಲ್ಲ ರಿಪೇರಿಗೆ ದಂಡ ತೆತ್ತೆ. ಖಂಡಿತ ಕೊಡೋದಿಲ್ಲ ಬಿಡು.

( ಬಿಡಿಸಿಕೊಳ್ಳಲು ಯತ್ನಿಸುವನು )

## ಭೀಮಪ್ಪ

ಇರ್ಲಿ ಮೇಷ್ಟ್ರೆ. ಈ ಚಣ ವಾಪಸ್ ತಂದ್ಕೊಡ್ತೀನಿ. ರವಷ್ಟು ಪೇಟೀಗೆ ಹೋಗಬೇಕು. ಎರಡು ಬೈಸ್ಕೋಲ್ ಆಯ್ತು, ಇನ್ನೊಂದು ಬೇಕು.

## ಉಪಾಧ್ಯಾಯ

ಖಂಡಿತ ಆಗೋದಿಲ್ಲ. ಬೈಸ್ಕಲ್ ಹಾಳಾಗಿಹೋದ್ರೆ ನಾನೇನು ಮಾಡಲಿ? ಈ ಊರಲ್ಲಿ ಒಂದು ಮನೆ ಮಾಡಿಕೊಡಿ ಅಂದ್ರೆ ಇನ್ನೂ ಮಾಡಿಕೊಡ್ತಾ ಇದ್ದಾರೆ. ಎಷ್ಟು ಹೇಳಿದರೂ ಕಿವಿಯಮೇಲೆ ಹಾಕಿಕೊಳ್ಳೋದೇ ಇಲ್ಲ. ಬಿಡು ಬೈಸ್ಕಲ್.

## ಭೀಮಪ್ಪ

ಬಿಡಿ ಮೇಷ್ಟ್ರೆ. ಈ ಬೈಸ್ಕೋಲ್ ಹೋದ್ರೆ ಬೇರೆ ಬೈಸ್ಕೋಲ್ ಸೊಗಸಾದ್ದು ತೆಗೆದುಕೊಡ್ತೀನಿ. ಈ ಬಾರಿ ಫಸಲು ಬರ್ಲಿ ನೋಡ್ರಾಗ.

( ಬಲವಂತವಾಗಿ ಎಳೆದುಕೊಂಡೇ ಹೋಗುವನು )

## ಉಪಾಧ್ಯಾಯ

ಈ ಹಳ್ಳೀಗೆ ಕೇಳೋರಿಲ್ಲ ಹೇಳೋರಿಲ್ಲ. ದೊಡ್ಡವರು ಹಾಗೆ, ಚಿಕ್ಕವರು ಹೀಗೆ. ನನಗೆ ಬರೋ ಸಂಬಳದಲ್ಲಿ ಹೇಗೋ ಮಿಗಿಸಿ, ಸಾಲಮಾಡಿ ಒಂದು ಸೈಕಲ್ ಕೊಂಡುಕೊಂಡ್ರೆ ಊರ ವರೆಲ್ಲ ಏರೋವ್ರೆ.

( ನಡುವಯಸ್ಸಿನ ಇಬ್ಬರ ಪ್ರವೇಶ )

೧ನೇಯುವ

ಏನ್ ಮೇಷ್ಟ್ರು, ಬಾಳ ಆಲೋಚನೆ ಮಾಡ್ತಾ ಇದ್ದೀರಿ?

ಉಪಾಧ್ಯಾಯ

ಏನು ಹೇಳಲಪ್ಪಾ! ಭೀಮಪ್ಪ ಬಂದು ನನ್ನ ಸೈಕಲ್ ಎತ್ತಿಕೊಂಡು ಹೋದ. ಬೇಡ ಅಂದ್ರೆ ಬಿಡಲಿಲ್ಲ. ನಾನೇನು ಮಾಡಲಿ!

೨ನೇಯುವ

ಎಲ್ಲೋಗ್ತೈತೆ ಮೇಷ್ಟ್ರೆ? ಪುನ ತಂದಿಡ್ತಾನೆ. ಏಕೆ ವೆಸನ ಪಡೋದು!

ಉಪಾಧ್ಯಾಯ

ನಿನಗೇನು ತಣ್ಣಗೆ ಹೇಳ್ತೀಯೆ. ಮೊನ್ನೆಯೆಲ್ಲ ರಿಪೇರಿಗೆ ತೆತ್ತಿನಲ್ಲ. ನನಗ್ಯಾರು ಕೊಡ್ತಾರೆ?

೧ನೇಯುವ

ನೀವೇಕೊಂಡ್ರೂನೂವೆ ರಿಪೇರಿ ಆಗಬೇಕಲ್ವಾ. ಸೈಕೋಲ್ ಅಂತ ಇದ್ದರೆ, ಯಾರಾದ್ರೂ ಏರೋವ್ರು. ದರ್ಮ ಬಂತು ಬಿಡಿ ಮೇಷ್ಟ್ರೆ. ಮತ್ತೆ ಏನ್ ಸಮಾಚಾರ?

ಉಪಾಧ್ಯಾಯ

ಇನ್ನೇನಪ್ಪಾ ಹೇಳಲಿ. ಈ ಊರವರ ಹತ್ತಿರ ದಿನಬೆಳ ಗಾದರೆ ರಗಳೆ ರಾದ್ಧಾಂತ. ದೊಡ್ಡ ಹುಡುಗರು ಸ್ಕೂಲಿಗೆ

ಬರೋದಿಲ್ಲ. ಸಣ್ಣ ಪಿಳ್ಳೆ ಎಲ್ಲಾ ತಂದು 'ನೋಡಿಕೊಳ್ರಲಾ' ಅಂತ ಕೂಡಿಸಿಬಿಟ್ಟು ಹೋಗ್ತಾರೆ.

### ೨ನೇಯುವ

ಸಂಬ್ಳ ತಿಂಗ್ಳು ತಿಂಗ್ಳೀಗೆ ಬರ್‍ತೈತೋ ಇಲ್ಲೋ, ಮತ್ತಾಕಾ ಚಿಂತೆ?

### ಉಪಾಧ್ಯಾಯ

ಅದೇನು ಸಂಬಳಾನೋ! ತಾರೀಕು ಇಪ್ಪತ್ತಾಯ್ತು. ಇನ್ನೂ ಕೈಗೆ ಸಂಬಳಾನೆ ಬಂದಿಲ್ಲ. ಬಂದರೂನೂವೆ ಹೊಟ್ಟೆಗೆ ಸಾಲದು ಬಟ್ಟೆಗೆ ಸಾಲದು.

### ೧ ನೇ ಗೌಡ

ಟಪಾಲ್ನವನು ಇತ್ತ ಬರಲಿಲ್ವಾ?

( ಟಪಾಲಿನವನ ಪ್ರವೇಶ. ಸಂಬಳ ಕೊಟ್ಟು ಹೋಗುವನು )

### ೨ನೇಯುವ

ಮೇಷ್ಟ್ರೇ, ಎಲ್ಡುರೂಪಾಯಿ ಕೊಟ್ಟೆರ್ರ. ಒಂದು ವಾರ ಬಿಟ್ಕೊಂಡು ಕೊಡುತಿವ್ನಿ.

### ಉಪಾಧ್ಯಾಯ

ಇಲ್ಲಪ್ಪೋ ಆಗೋದಿಲ್ಲ. ಹೋದ ತಿಂಗಳಲ್ಲಿ ಈಯಪ್ಪ ಎರಡು ರೂಪಾಯಿ ತೆಗೊಂಡವನು ಇನ್ನೂ ಕೊಡ್ತಾ ಇದ್ದಾನೆ. ನಾನು ಬಡವ.

### ೧ನೇಯುವ

ನೀವೆಂತಾ ಬಡವ್ರು ಮೇಷ್ಟ್ರೆ! ತಿಂಗ್ಳುತಿಂಗಳ್ಗೆ ಬೆಳ್ಳಗೆ ಹದಿನೋದು ರುಪಾಯಿ ಕೈಗೆ ಬರ್‍ತೈತೆ. ನಾವು ರೈತೊರು ವರ್ಸಕ್ಕೆ ನಾಲ್ಕು ಕಾಳು ಕಾಣೋದೇ ಕಷ್ಟ. ಹತ್ತು ಖಂಡುಗ ಬೆಳೆಯೋ ಕಡೆ ಎರಡು ಖಂಡುಗ ಬರ್ತಾ ಇಲ್ಲ. ಕಂದಾಯ ಗಿಂದಾಯ ಕೊಟ್ಮೇಕೆ ನಮ್ಕೇನುಳೀತೈತೆ. ನೀವೇ ಬಡವರಾದ್ರೆ ನಾವು ಏನೂ ಅಂತ ಹೇಳಿ?

### ಉಪಾಧ್ಯಾಯ

ಅದೇನೋ ನನಗೆ ಗೊತ್ತಿಲ್ಲ. ನನಗೆ ಐದು ಮಕ್ಕಳು, ಸಾಲದ್ದಕ್ಕೆ ಭಾಮೈದ ಒಬ್ಬ, ನನ್ನ ತಾಯಿ ಒಬ್ಬಳು ಮುದುಕಿ. ನನ್ನ ಸಂಸಾರ ಹೇಗೆ ನಡೀಬೇಕು. ನಿಮಗೇನು ಎಲ್ಲಾರೂ ಗೆಯ್ತೀರಿ, ಕೂಲಿ ಗೀಲಿ ಮಾಡಿಕೊಂಡು ಜೀವನ ಮಾಡ್ತೀರಿ. ನನ್ನ ಮನೇಗೆ ನಾನೊಬ್ಬನೇ ದುಡೀಬೇಕು. ರೂಪಾಯಿ ಗೀಪಾಯಿ ಕೊಡೋದಕ್ಕೆ ಆಗೋದಿಲ್ಲ.

### ೨ನೇಯುವ

ಇಲ್ಲ ಮೇಷ್ಟ್ರೇ ದಮ್ಮಯ್ಯ, ಅಂಗೆಲ್ಲ ಅನ್ನಬೇಡಿ. ಕಂಡಿತ ಬೀರೇ ದೇವ್ರಾಣೆ. ಒಂದು ವಾರದಾಗೆ ಕೊಟ್ಬುಬಿಡ್ತೀನಿ. ಇವನ್ಕೈಲೂ ನಿಮ್ಮ ಸಾಲ ಕೊಡ್ಸಿತೀನಿ.

### ಉಪಾಧ್ಯಾಯ

ಆಗೋದಿಲ್ಲಪ್ಪೊ ಆಗೋದಿಲ್ಲ. ನಾನು ಪಾಠ ಮಾಡಬೇಕು ನೀವೆಲ್ಲ ಹೊರಟುಹೋಗಿ.

### ೧ನೇಯುವ

ಇಂಗೆಲ್ಲ ಒಳ್ಳೇ ಮಾತಾಗೆ ಕೇಳಿದ್ರೆ ಈ ಮೇಷ್ಟ್ರು ಕೊಟ್ಟಾನಾ !

### ಉಪಾಧ್ಯಾಯ

ಮತ್ತೆ ಏನು ಮಾಡ್ತೀಯಾ ? ಅರ್ಜಿ ಬರೀತೀಯ, ಅಷ್ಟೇ ತಾನೆ. ದೇವರಿದ್ದಾನೆ, ನೋಡ್ಕೋತಾನೆ. ಹಗಲೂ ರಾತ್ರಿ ಈ ಹಳ್ಳಿಯವರಿಗೆ ದುಡಿದೂ ದುಡಿದೂ ಹಣ ಕಳಕೊಂಡು, ಬೈಸ್ಕಲ್ ಕಳಕೊಂಡು, ಜನಕ್ಕೆ ಹೆದರಿ, ದೇವರಿಗೆ ಹೆದರಿ, ಕೆಲಸ ಮಾಡಿದರೆ ಕಡೆಗೆ ಇವರು ಮಾಡೋ ಉಪಕಾರ ನನ್ನ ಮೇಲೆ ಅರ್ಜಿ ಬರೆಯೋದು. ಅದಕ್ಕೇನೆ ಮಳೆಯಿಲ್ಲ, ಬೆಳೆಯಿಲ್ಲ, ರೋಗರುಜಿನ ಹಿಡಿದುಕೊಂಡು ತಿಂತಿದೆ.

### ೨ನೇಯುವ

ಏನೋ ಕಷ್ಟ ಕಾಲ ಎಲ್ಡು ರುಪಾಯಿ ಕೊಟ್ಟಿರಪ್ಪ, ಆಮೇಲೆ ಕೊಡ್ತಿನ್ವಿ ಎಂದರೆ ನಮ್ಮೆಲ್ಲ ಬೈತೀಯಾ ? ನೀನು ಮನೆ ಸೇರೋದು ನೋಡ್ತಿನ್ವಿ ತಾಳು.

### ಉಪಾಧ್ಯಾಯ

(ಸ್ವಗತ) ಈ ಒರಟು ಜನರ ಮಧ್ಯೆ ಬಾಳೋದು ಬಲು ಕಷ್ಟ, ಬಲು ಕಷ್ಟ. ನಮ್ಮಪ್ಪ ದೇವರೇ ! ಮೇಲಿನವರಿಗೆ ಏನು ಗೊತ್ತಾಗುತ್ತೆ. ಇಲ್ಲಿ ಒಂದೆರಡು ದಿವಸ ಇವರ ಹತ್ತಿರ ಎಲ್ಲ ಏಗಿದರೆ ಆಗ ತಿಳಿಯುತ್ತೆ. ಇಷ್ಟೆಲ್ಲ ತಾಳಿಕೊಂಡು ಕಷ್ಟಪಟ್ರೂ ಹಾಳು ಸ್ಕೂಲು ಉದ್ಧಾರವಾಗೋದಿಲ್ಲ ಹೋಗೋದಿಲ್ಲ.

೧ನೇಯುವ

ಏನ್ ಮೇಷ್ಟ್ರೆ ಏನೋ ಗೊಣಗಾಡ್ತಾ ಇದ್ದೀ. ಎಲ್ಡು ರುಪಾಯಿ ಕೊಟ್ಟು ನಮ್ಮನ್ನಾಚೆ ಕಳ್ಸಿ ಪಾಠ ಮಾಡಿಕೋ.

ಉಪಾಧ್ಯಾಯ

ತೆಗೋಳ್ಳಪ್ಪ ತೆಗೋ. ಯಮದೂತರು ಹಿಡಿದ ಹಾಗೆ ಹಿಡಿದು ಬಿಟ್ಟರೆ ನಾನು ಉಳಿಯೋದು ಹೇಗೆ.

( ಕೊಡುವನು. ಅವರಿಬ್ಬರೂ ಹೊರಡುವರು )

೨ನೇಯುವ

ಆಯ್ತು ಬಿಡು, ಓಟಲ್‌ಕರ್ಚು ಇಸ್ಪೀಟ್ ಕರ್ಚು ಎದ್ದಂಗಾಯ್ತು.

೧ನೇಯುವ

ಏನ್ ಚರ್ಚೆ ಮಾಡ್ತನ್ನೆ ಈ ಮೇಷ್ಟ್ರು ನಮ್ಮೂರಾಗೆ ಬಂದು! ಈ ದಿನ ಎಲ್ಡು ರೂಪಾಯಿ ಕೊಡದಿದ್ರೆ ಆ ಮೇಷ್ಟ್ರಗೆ ಮಾಡಿದಂಗೆ ಇವನ್ಗೂವೆ ಮಾಡ್ತಿದ್ದೆ. ಇವನಂಗೇ ಆ ಮೇಷ್ಟ್ರು ಜಬರ್ದಸ್ತಿ ಮಾಡ್ತಿದ್ದ. ಒಂದಿನ ಅವನ್ಗೆ ಕೊಟ್ಟೇ ನೋಡು ಕೆಲ್ಸಾನ. ಅವನೆಂದೂ ಮರೀಲಿಕ್ಕಿಲ್ಲ.

( ಉಪಾಧ್ಯಾಯರು ಪಾಠ ಮಾಡುತ್ತಿರುವರು. ಒಬ್ಬ ಗೌಡನ ಪ್ರವೇಶ )

ಗೌಡ

ಸೋಮಿ, ಮೇಷ್ಟ್ರೇ ಮೇಷ್ಟ್ರೇ !

### ಉಪಾಧ್ಯಾಯ

ಏನಪ್ಪಾ, ನಿನ್ನದೇನು ಹೇಳು.

### ಗೌಡ

ಒಂದು ಹಾಳೆ ಕಾಗದ ಕೊಡಿ ಸೋಮಿ.

### ಉಪಾಧ್ಯಾಯ

ಎಲ್ಲೋ ಸ್ವಲ್ಪವೇ ಇದೆಯಲ್ಲ.

### ಗೌಡ

ಒಂದು ಹಾಳೆ ಕೊಡ್ರಲಾ ಸಾಕು. ಸೋಮಿ, ಅಂಗೇನೆ ಒಂದರ್ಜಿ ಗೀಚಿ ಕೊಡ್ರಲಾ. ಅಮಲ್ದಾರ್ರು ಬರ್ತಾರಿತ್ತ, ಅರ್ಜಿ ಕೊಡ್ಬೇಕು.

### ಉಪಾಧ್ಯಾಯ

ಈಗ ಪುರಸೊತ್ತಿಲ್ಲ, ಪಾಠ ಮಾಡಬೇಕು. ಸ್ಕೂಲಾಗಲಿ ಆಮೇಲೆ ಬರೆದುಕೊಡ್ತೇನೆ.

### ಗೌಡ

ಆಗಾಕಿಲ್ಲ ಸೋಮಿ. ಈಗ ಬರ್ತವ್ರೆ. ನನ್ನ ಗದ್ದೆಗೆ ನೀರೇ ಬಿಡಲಿಲ್ಲ. ಶಾನುಬಾಗರು ಕಂದಾಯ ಮಾತ್ರ ಏರಿಸಿಬಿಟ್ಟವ್ರೆ. ಓಟು ದಮ್ಮಯ್ಯಗುಡ್ಡೆ ಇಟ್ರೊನೂಪೆ ಪಲಾ ಆಗಲಿಲ್ಲ. ಶೇಕದಾರ್‍ರೂನೂ ಅವರ ಕಡೇನೇ ಅವ್ರೆ.

**( ಉಪಾಧ್ಯಾಯರು ಬರೆದುಕೊಡುವರು, ಇನ್ನೂ ಕೆಲವರ ಪ್ರವೇಶ )**

೧ನೇಯುವ

ಮೇಷ್ಟ್ರೇ! ಮೇಷ್ಟ್ರೇ! ಅಮಲ್ದಾರ್ ಸಾಹೇಬ್ರು ಬರ್ತವ್ರೆ. ಇಸ್ಕೋಲ್ ಬಿಟ್ಟುಬಿಡಿ ಮೇಷ್ಟ್ರೆ.

ಉಪಾಧ್ಯಾಯ

ಆಗೋದಿಲ್ಲಪ್ಪ. ಹಾಗೆಲ್ಲ ರೂಲ್ಸಿಲ್ಲ.

೨ನೇಯುವ

ಇದು ಪಂಚಾಯ್ತಿ ಕಟ್ಟಡ ಮೇಷ್ಟ್ರೆ. ಇಸ್ಕೋಲಿಗಿನ್ನೂ ಕಟ್ಟಡ ಕಟ್ಸಿಲ್ಲ. ನಿಮ್ಮ ಇಲಾಖೇರ್ನ ಕೇಳಿದರೆ ನೀವೇ ಕಟ್ಸಿ ಅಂತ ತಾಕೀತ್ ಮಾಡ್ತಾರೆ. ಎಲ್ಲಾ ಹಳ್ಳೀಗೂ ಕಟ್ಸತವ್ರೆ ನಮ್ಮ ಹಳ್ಳೀಗಿಲ್ಲ. ಏ ಅಪ್ಪಣ್ಣೀ ಮನೇಗೆ ಹೋಗ್ರಲಾ.

(ಹುಡುಗರು ಸ್ಲೇಟು ಪುಸ್ತಕ ಎತ್ತಿಕೊಳ್ಳುವರು.
ಉಪಾಧ್ಯಾಯರು ತಡೆದು)

ಉಪಾಧ್ಯಾಯ

ಬೇಡಪ್ಪೋ, ಹಾಗೆಲ್ಲ ಬಿಡೋದಿಲ್ಲ. ನಾನು ಮೇಲಕ್ಕೆ ರಿಪೋರ್ಟು ಮಾಡ್ತೀನಿ. ದೊಡ್ಡ ಸಾಹೇಬರಿಗೆ ತಿಳಿದರೆ ದೊಡ್ಡ ಪ್ರಮಾದ ಆಗುತ್ತೆ. ಅವರು ಸುಮ್ಮನೇ ಇರೋದಿಲ್ಲ, ಫರಂಗಿ ಜನ! ಅವರು ಮಿಲ್ಟೇರಿ!

೧ನೇಯುವ

ಮಿಲ್ಟೇರಿ ಗಿಲ್ಟೇರಿ ನಮ್ತಾವ ಏನ್ ನಡೀತೈತೆ! ಎಲಾ ಹೋಗ್ರಲಾ ಮನೇಗೆ. ಅಮಲ್ದಾರ್ರ ಸ್ವಾರಿ ಬಂದೇ ಬಂತು!

( ಹುಡುಗರೆಲ್ಲರೂ ಹೊರಟುಹೋಗುವರು.
ಅಮಲ್ದಾರ್ರು ಮೊದಲಾದವರ ಪ್ರವೇಶ )

ಅಮಲ್ದಾರ್ರು

ಏನು ಮೇಷ್ಟ್ರು ತಕರಾರು ? ನೀನೇನೋ ಮೇಷ್ಟ್ರು ?

ಉಪಾಧ್ಯಾಯ

ಹೌದು ಸ್ವಾಮಿ.

ಅಮಲ್ದಾರ್ರು

ಏನ್ ನಿನ್ನ ಹೆಸರು ?

ಉಪಾಧ್ಯಾಯ

ರಾಮಚಂದ್ರಯ್ಯ ಸ್ವಾಮಿ.

ಅಮಲ್ದಾರ್ರು

ನಿನ್ನ ಸಂಬಳ ?

ಉಪಾಧ್ಯಾಯ

ಹದಿನೈದು ರೂಪಾಯಿ ಸ್ವಾಮಿ.

ಅಮಲ್ದಾರ್ರು

ಎಷ್ಟು ವರ್ಷ ಸರ್ವಿಸ್ಸು ?

ಉಪಾಧ್ಯಾಯ

ಇಪ್ಪತ್ತಾಯ್ತು ಸ್ವಾಮಿ.

ಅಮಲ್ದಾರರು

ಇದು ಪಂಚಾಯ್ತಿ ಕಟ್ಟಡ. ಇಲ್ಲಿ ಸ್ಕೂಲ್‌ಗೀಲ್ ಮಾಡಕೂಡದು.

ಉಪಾಧ್ಯಾಯ

ಅಪ್ಪಣೆ ಮಹಾಸ್ವಾಮಿ. ಗ್ರಾಮಸ್ಥರು ಹೇಳಿದರು, ನಾನು ಮಾಡ್ತಿದ್ದೇನೆ. ಬೇರೆ ಕಟ್ಟಡ ಕಟ್ಟಿಸಿಕೊಡಿ ಎಂತ ಎಷ್ಟು ತಗಾದೆ ಕೊಟ್ಟರೂ ಕಟ್ಟಿಸಿಲ್ಲ, 'ಇಲ್ಲೇ ಮಾಡಿ ಮೇಷ್ಟ್ರೆ' ಅಂದರು. ನಾಳೆಯಿಂದ ಸ್ಕೂಲು ಎಲ್ಲಿ ಮಾಡಲಿ ಮಹಾಸ್ವಾಮಿ ?

ಅಮಲ್ದಾರರು

ಎಲ್ಲಾದರೂ ಮಾಡು, ಮರದ ಕೆಳಗೆ ಮಾಡು.

ಉಪಾಧ್ಯಾಯ

ಬೆಂಚು, ಬೋರ್ಡು, ಸಾಮಾನು ಎಲ್ಲಿಟ್ಟುಕೊಳ್ಳಲಿ ಸ್ವಾಮಿ ?

ಅಮಲ್ದಾರರು

ತಲೇಮೇಲಿಟ್ಟುಕೋ.

ಉಪಾಧ್ಯಾಯ

ಮಹಾಸ್ವಾಮಿ, ನಾನು ಸರ್ಕಾರಿ ನೌಕರ. ರೂಲ್ಸು ಇದ್ದ ಹಾಗೆ ನಾನು ಚಾಕರಿ ಮಾಡ್ತೇನೆ. ನನ್ನಮೇಲೆ ಕೋಪ ಮಾಡ್ತೀರಿ. ನನಗೇನು ಸ್ವಾಮಿ, ಎಲ್ಲಿ ಪಾಠ ಮಾಡು ಅಂದರೆ ಅಲ್ಲಿ ಮಾಡ್ತೇನೆ.

## ೧ ನೇ ಗೌಡ

ಮಾಸ್ವಾಮಿ, ಮೇಷ್ಟ್ರು ಸರಿಯಾಗಿ ಇಸ್ಕೋಲೇ ಮಾಡಾಕಿಲ್ಲ. ಎಲ್ಡು ದಿವ್ಸ ಬಾಕ್ಲು ತೆಗೆದ್ರೆ ನಾಕ್ ದಿವ್ಸ ಮುಚ್ಚಿಬಿಡ್ತಾರ. ಆ ರಜ, ಈ ರಜ, ಅಂತ ನೆಪ ಹೇಳ್ತಿರೋದೇ. ದಿನಾಗೂ ನಮ್ಮಕ್ಳು ಇಸ್ಕೋಲಿಗೆ ತಿರುಗೋದು ವಾಪಸ್ ಬರೋದು. ಎರಡಚ್ಚ್ರಊನೂವೆ ಬರಲಿಲ್ಲ.

## ಉಪಾಧ್ಯಾಯ

ಸ್ವಾಮಿ . . . .

## ೨ನೇ ಗೌಡ

ಸಾಲದ್ದಾಕೆ, ಬದನೇಕಾಯಿ ತಂದ್ಕೊಡು, ಕುಂಬಳ್ಕಾಯಿ ತಂದ್ಕೊಡು ಅಂತಾ ಬೆದ್ರಿಸ್ತಾರ. ಮಕ್ಳು ಇಸ್ಕೋಲ್ಗೇ ಹೋಗಣೆ ಬಯಬಿದ್ದು ಮನ್ಯಾಕೇ ಕುಂತವೆ.

## ೧ನೇ ಗೌಡ

ಇಸ್ಕೋಲ್ಗೋದ್ರೆ ಮಕ್ಕಳ್ನ ಚಚ್ಚ್ತೋಕೆ, ಮುದ್ದೆ ತಿರುವೋ ಗೂಟ, ಗೂಟಾವ ಮಡಕೊಂಡವ್ರೆ. ಎಂಗ್ ಸೋಮಿ ನಮ್ಮಕ್ಳು ಬದ್ಕೋದು.

## ಉಪಾಧ್ಯಾಯ

ಸ್ವಾಮಿ, ಇಲ್ಲದ್ದನ್ನೆಲ್ಲ ನನ್ನಮೇಲೆ ಹೇಳುತ್ತಾರೆ. ರೂಲು ಹಾಕುವುದಕ್ಕೆ ರೂಲರ್ ಇಟ್ಟುಕೊಂಡಿದ್ದೇನೆ ಸ್ವಾಮಿ, ಅಷ್ಟೇ.

೨ನೇ ಗೌಡ

ಸುಮ್ಕಿರಿ ಮೇಷ್ಟ್ರು, ಕಂಡಿವ್ನಿ. ಯಾವಾಗ್ಲ ನೋಡಿದ್ರೂ, ರೋಲ್ಸು, ರೋಲರ್ ಮಾತೇ ಆಡ್ತವ್ರೆ.

೧ನೇಗೌಡ

ಮೂರೊತ್ತೂ ಬರ್ಕೋತಾನೆ ಹೊತ್ತು ಕಳೀತವ್ರೆ. ಹುಡುಗರೀಗೆ ಪಾಟಾನೇ ಮಾಡೋಕಿಲ್ಲ. ಗೋಡ್ಗೆಲ್ಲ ಪಟ ಅಂಟ್ಸೋದು ರೋಜಿಸ್ಟರ್ ಬರೆಯೋದು, ಇನ್ನೂ ಏನೋ ಟಿಪ್ಪಣಿಗಿಪ್ಪಣಿ ಅಂತ ಮಸಿ ಚೆಲ್ತಿರೋದು. ಏನ್ ಸೋಮಿ ಮಕ್ಕಳ್ಗೆ ಇಸ್ಟೆ ಒರಬ್ಯಾಡ್ವಾ.

೨ನೇ ಗೌಡ

ಮೂರೊರ್ಸ, ನಾಕೊರ್ಸ ಆದರೂನೂವೆ ಅ, ಆ ನೇ ಕಲೀತಾ ಅವ್ರೆ ಪುಸ್ತಕ ತೆಕ್ಕೊಡು, ಇಸ್ಲೇಟ್ ತೆಕ್ಕೊಡು ಅಂತ ಸುಮ್ನೇ ತಗಾದೆ ಮಾಡ್ತವ್ರೆ. ಓಟೊಂದು ಸೋಮಿ ತೆಕ್ಕೊಡೋದು. ಇಸ್ಕೋಲ್ ಬಂದು ನಮ್ಮ ಮನೆ ಮಟಾ ಎಲ್ಲಾ ಆಳಾಗೋಯ್ತು.

೧ನೇ ಗೌಡ

ಇನ್‌ಚ್‌ಪೆಟ್ರು ಬರೋದು ಸುಮ್ನೆ ರೋಜಿಸ್ಟರ್ ತಿರುಗ್ಸಕೋದು, ಏನೋ ಗೀಚ್ಕೊಂಡೋಗೋದು.

ಅಮಲ್ದಾರ್ರು

ಯಾರು ನಿಮ್ಮ ಇನ್‌ಸ್ಪೆಕ್ಟರ್?

### ಉಪಾಧ್ಯಾಯ

ಅದೇನೋ ಹೇಳುತ್ತಾರೆ ಸ್ವಾಮಿ. ಇಂಗ್ಲಿಷಿನಲ್ಲಿ ರುಜು ಮಾಡ್ತಾರೆ, ಹೆಸರು ತಿಳಿಯೋದಿಲ್ಲ.

( ಅಮಲ್ದಾರರು ಒಳಕ್ಕೆ ಹೋಗುವರು, ಬೆಂಚು ಜೋಡಿಸಿ ಗ್ರಾಮಸ್ಥರು ಅಣಿಮಾಡುವರು )

### ೩ನೇ ಗೌಡ

ಮೇಷ್ಟ್ರೇ ಯೋಚನೆ ಮಾಡಬ್ಯಾಡಿ, ಹಳ್ಳೀ 'ಜನ ಅಂಗೇನೆ, ಒರಟು ಜನ. ನೀವು ಕಸ್ಟಪಟ್ಟು ಕೆಲ್ಸ ಮಾಡ್ತಿವ್ರಿ. ನಾ ಕಾಣ್ನ್ಯಾ

### ೪ನೇ ಗೌಡ

ಬನ್ನಿ ಅಯ್ನೋರೆ, ಮೊದಲು ಅಮಲ್ದಾರ್ರಗೆ ಕಾಪಿ ಮಾಡಿ ಕೊಡ್ರಲಾ. ಬಾಳ ದಣಿದು ಬಂದವ್ರೆ. ನಾವೆಲ್ಲ ನಿಮ್ಮ ಇನ್ಸ್‌ಪೆಟ್ರಗೆ ಹೇಳ್ತೀವಿ ; ಅವರೇನೂ ಮಾಡಾಕಿಲ್ಲ.

### ೩ನೇ ಗೌಡ

ಅಂಗೇನೆ, ದೇವಸ್ಥಾನದಾಗೆ ರವಷ್ಟು ಅಡಿಗೇ ಮಾಡಿಸಿ ಮೇಷ್ಟ್ರು. ಅಮಲ್ದಾರ್ರ ಮೊಕ್ಕಾಂ ಈ ದಿನ ಇಲ್ಲೇ ಇತ್ತೈತೆ.

## ದೃಶ್ಯ ೩

(ಚೇರ್ಮನ್ ಈರಣ್ಣಗೌಡನ ಮನೆಯ ಹತ್ತಿರ ಕಾಡೇಗೌಡ ಓಡಿಬರುವನು)

**ಕಾಡೇಗೌಡ**

ಅಪ್ಪೋ, ಯಾರೋ ಸಾಹೇಬ್ರು ಬಂದವ್ರೆ. ಕರೀತಾರ್ ನಿನ್ನ.

**ಈರಣ್ಣಗೌಡ**

(ಗಾಬರಿಯಿಂದ) ಅಂಗೀ ರುಮಾಲ್ ತತ್ತಾರ. ಯಾವ ಸಾಹೇಬ್ರೋ? ದುಪಟಿ ಕಮಿಸರ್ ಸಾಹೇಬ್ರಾ? ಮೋಟಾರ್ನಾಗೆ ಬಂದವ್ರಾ?

**ಕಾಡೇಗೌಡ**

ಅಲ್ಲಪ್ಪೋ, ಅಂಗೇ ಬಂದವ್ರೆ.

**ಈರಣ್ಣಗೌಡ**

ಸಬ್ ಡೀಜನ್ ಸಾಹೇಬ್ರಾ? ಪರಂಗಿ ಟೋಪಿ ಮಡಕ್ಕೊಂಡವ್ರಾ?

**ಕಾಡೇಗೌಡ**

ಇಲ್ಲಪ್ಪೋ, ರುಮಾಲ್ ಅಕವ್ರೆ.

**ಈರಣ್ಣಗೌಡ**

ಅಂಗಾದ್ರೆ ಅಮಲ್ದಾರ್ ಸ್ವಾರಿ ಬಂತೇನೋ. ಮೊನ್ನೇನಾಗ ಬಂದಿದ್ರಲ್ಲೋ.

ಕಾಡೇಗೌಡ

ಅಮಲ್ದಾರ್ರಲ್ ಕಾಣಪ್ಪೋ. ನಾಕಾಣ್ನಾ ಅಮಲ್ದಾರ್ರನ್ನ? ಇನ್ ಚ್ ಪೆಟ್ರಂತೇ ಕಾಣಪ್ಪ, ಇನ್ ಚ್ ಪೆಟ್ರು.

ಈರಣ್ಣಗೌಡ

ಯಾವ ಇನ್ ಚ್ ಪೆಟ್ರಪ್ಪ! ಮತ್ತೇ ನನ್ ತಲೇಗೆ ತಂದಾರು! ಡ್ರಿಸ್ ಮೇಲೆ ಬಂದವ್ರಾ? ಪೋಲೀಚ್ ಇನ್ ಚ್ ಪೆಟ್ರಾ?

ಕಾಡೇಗೌಡ

ಡ್ರಿಸ್ ಗಿಸ್ ಇಲ್ಲಪ್ಪ. ಸೈಕೋಲ್ ಮ್ಯಾಗೆ ಸುಮ್ನೆ ಬಂದವ್ರೆ.

ಈರಣ್ಣಗೌಡ

ಹೋಗಲಿ ಬಿಡು. ಇನ್ನು ಜೀವ ಉಳೀತು. ಮತ್ತಾವ ಇನ್ ಚ್ ಪೆಟ್ರಾದ್ರೂನೂವೆ, ಪರವಾಯಿಲ್ಲ. ಚಾನಟರಿ ಇನ್ ಚ್ ಪೆಟ್ರೋ, ಕಾಪಿ ಟೀ* ಇನ್ ಚ್ ಪೆಟ್ರೋ ಇರಬೋದು. ನಡಿ ಹೋಗಾನ, ರುಮಾಲು ಅಂಗಿ ಯಾಕ?

ಕಾಡೇಗೌಡ

ಇಸ್ಕೋಲ್ ತಾವ ಅವ್ರೆ. ಒಳಕ್ಹೋದ್ರಪ್ಪೋ—ಮೇಷ್ಟ್ರು ಗಾಬರಾಗಿದ್ರು.

---

*ಕೋ-ಆಪರೇಟಿವ್.

ಈರಣ್ಣಗೌಡ

ಇಸ್ಕೋಲ್ ಇನ್‌ಚ್‌ಪೆಟ್ರು! ಮೊದಲಾಕೆ ಏಳ್‌ಬೇಕಾ ಇಲ್ವ. ಅಯ್ಯೋ ಪೆದ್ದಪ್ಪ! ಈ ಹಳ್ಯಾಗೆ ಈಟು ವರ್ಸ ಇದ್ದೂ ಇಸ್ಕೋಲ್ ಇನ್‌ಚ್‌ಪೆಟ್ರು ಗೊತ್ತಾಗಾಕಿಲ್ವ?

ಕಾಡೇಗೌಡ

ಹೊಸಬ್ರು ಕಾಣಪ್ಪ. ಯಾರೋ ಎಂತೋ ಅಂತ ಬಯ.

ಈರಣ್ಣಗೌಡ

ಹೋಕಲೇಳು. ಗದ್ದೇತಾವ ಹೋಗ್ಬಿಟ್ವು ಅಂಗೇ ಬರ್ತಿವ್ನಿ.

ಕಾಡೇಗೌಡ

ಇಲ್ಲಪ್ಪೋ, ಈಗಲೇ ಬರಬೇಕಂತ ಹೇಳ್ತವ್ರೆ.

ಈರಣ್ಣಗೌಡ

ದುಪಟಿಕಮಿಾಸರ್ ಕೆಟ್ಕೋದ್ರಾ! ಅಮಲ್ದಾರ್ ಕೆಟ್ಕೋದ್ರಾ! ಅಲ್ಲೇ ಕುಕ್ಕರಿಸಿರಲೇಳು. ನಮ್ಕೆಲ್ಲ ನೋಟೀಸ್ ಕೊಟ್ಟವ್ನೆ. ನಮ್ಕೆಲ್ಲ ನೋಟೀಸ್ ಕೊಡಾಕೆ ನಾವೇನು ಬೇವಾರ್ಸಿ ಕುಳಾನಾ? ಗಪ್ಪರ್‌ಜಂಟ ನೊಂಬರು ನಾನು. ಅವನ್ಕೆ ಇಷ್ಟೂ ಗೊತ್ತಾಗಾಕಿಲ್ವಾ? ಇಸ್ಕೋಲ್ ಕಟ್ಟಡ ಕಟ್ಟಿಸದಿದ್ದರೆ ಇಸ್ಕೋಲ್ ತೆಗೆದುಬಿಡ್ತಾನಂತಲ್ಲ. ಅದೆಂಗೆ ತೆಗೀತಾನ ನೋಡ್ತೀವ್ನಿ. ಅಂದಿನ ರಾಮಣ್ಣಗೌಡ ಅಲ್ಲ. ಕಾಲಿಗೆ ಬಿದ್ದು ಇಸ್ಕೋಲು ಕೇಳೋಕೆ.

**ಕಾಡೇಗೌಡ**

ಅದೆಲ್ಲಾ ಅಲ್ಲೇ ಮಾತೋಡು ಬಾಪ್ಪೋ.

**ಈರಣ್ಣಗೌಡ**

ಬರ್ತೀನಿ ಅಂತ ಹೇಳೋಗತ್ತ್ರೆ.

**ಕಾಡೇಗೌಡ**

ಬಿರೀನ ಬಾ.

---

## ದೃಶ್ಯ ೪

( ಇನ್ಸ್ಪೆಕ್ಟರ್ ಪ್ರವೇಶ. ಉಪಾಧ್ಯಾಯರು ಗಾಬರಿಯಿಂದ ಎದ್ದು ನಮಸ್ಕಾರ ಮಾಡುವರು )

**ಇನ್ಸ್ಪೆಕ್ಟರ್**

ಯಾಕೆ ಹುಡುಗರ ಸಂಖ್ಯೆ ಕಡಮೆ ?

**ಉಪಾಧ್ಯಾಯ**

ಹಳ್ಳೀ ಹುಡುಗರು, ಬೇಗ ಬರೋದಿಲ್ಲ ಸ್ವಾಮಿ. (ಇಬ್ಬರು ಹುಡುಗರನ್ನ ಕರೆದು) ಇನ್ಸ್ಪೆಕ್ಟರು ಸಾಹೇಬ್ರು ಬಂದಿದ್ದಾರೆ. ಹುಡುಗರನ್ನು ಕರೆದುಕೊಂಡು ಬನ್ನಿ ಹೋಗಿ.

**ಇನ್ಸ್ಪೆಕ್ಟರ್**

ಬೆಲ್ ಹೊಡೀರಿ ಮೇಷ್ಟ್ರೆ, ಹುಡುಗರು ಬರ್ತಾರೆ.

ಉಪಾಧ್ಯಾಯ

ಬೆಲ್ ಇಲ್ಲಿಲ್ಲ ಸ್ವಾಮಿ.

ಇನ್‌ಸ್ಪೆಕ್ಟರ್

ಇದೇಕೆ? ಮೊನ್ನೆ ನಿಮ್ಮ ಸ್ಕೂಲಿಗೆ ಗಡಿಯಾರ, ಬೆಲ್ಲು ಸಪ್ಲೈ ಮಾಡಲಿಲ್ವೆ?

ಉಪಾಧ್ಯಾಯ

ಆಯ್ತು ಸ್ವಾಮಿ. ಬೆಲ್ಲು ಮನೇಲಿಟ್ಟಿದ್ದೇನೆ.

ಇನ್‌ಸ್ಪೆಕ್ಟರ್

ಅದೇಕೆ, ದೇವರ ಪೂಜೆಗೋ?

ಉಪಾಧ್ಯಾಯ

ಅಲ್ಲ ಸ್ವಾಮಿ. ಸ್ಕೂಲಿಗೆ ಸರಿಯಾದ ಬೀಗವಿಲ್ಲ. ಎಷ್ಟು ರಿಪೋರ್ಟು ಮಾಡಿದರೂ ಸ್ವಾಮಿಯವರ ಚಿತ್ತಕ್ಕೆ ಬರಲಿಲ್ಲ. ಈ ಹಳೇ ಬೀಗ ಮುರಿದು ತುಂಟರು ಸ್ಕೂಲೊಳಕ್ಕೆ ನುಗ್ಗಿ ಸಾಮಾನೆಲ್ಲ ಎತ್ತಿಕೊಂಡು ಹೋಗ್ತಾರೆ. ಅದರಲ್ಲೂ ಗಡಿಯಾರ ಗಂಟೆ ಬಿಡೋದೇ ಇಲ್ಲ, ಕದ್ದುಬಿಡ್ತಾರೆ.

ಇನ್‌ಸ್ಪೆಕ್ಟರ್

ಒಳ್ಳೇ ಮೇಷ್ಟ್ರು ನೀವು.

### ಉಪಾಧ್ಯಾಯ

ಏನೋ ಸ್ವಾಮಿ, ಬಡವ, ಐದು ಮಕ್ಕಳು, ಮನೆ ತುಂಬ ಜನ, ಬರೋ ಸಂಬಳದಲ್ಲಿ ಗಂಜಿಯೋ ಅಂಬಲಿಯೋ ಕುಡ ಕೊಂಡು, ಅಡ್ಡದಾರೀಗೆ ಬೀಳದೆ, ಸತ್ಯ ಹಿಡಿದು ದುಡೀತಿದೇನೆ.

### ಇನ್‌ಸ್ಪೆಕ್ಟರ್

(ಹಾಜರಿ ನೋಡುತ್ತ) ಏಕೆ ಎಲ್ಲರಿಗೂ ಹಾಜರಿ ಹಾಕಿಲ್ಲ? ನಮ್ಮ ಸಕ್ಯುರ್ಲರಂತೆ ಯಾಕೆ ನಡೆಯೋದಿಲ್ಲ?

### ಉಪಾಧ್ಯಾಯ

ಎಷ್ಟು ಹೇಳಿದರೂ ಹಳ್ಳಿ ಜನ ತಡೆದು ತಡೆದು ಬರುತ್ತಾರೆ. ಹೇಳಿದ ಮಾತು ಕೇಳೋದಿಲ್ಲ ಸ್ವಾಮಿ.

### ಇನ್‌ಸ್ಪೆಕ್ಟರ್

ಏಳೂವರೆ ಗಂಟೆಗೆ ಹಾಜರಿ ಹಾಕಿ ಮುಗಿಸಬೇಕು. ಎಷ್ಟು ಸಾರಿ ನಿಮಗೆ ಹೇಳೋದು?

### ಉಪಾಧ್ಯಾಯ

ಅಪ್ಪಣೆ ಸ್ವಾಮಿ. ಇನ್ನು ಮುಂದೆ ಹಾಗೇ ಮಾಡ್ತೀನಿ.

### ಇನ್‌ಸ್ಪೆಕ್ಟರ್

(ಹಾಜರಿ ನೋಡಿ ಕರೆಯುವರು) ರಾಮು!

### ಉಪಾಧ್ಯಾಯ

ಎರಡಕ್ಕೆ ಹೋಗಿದ್ದಾನೆ ಸ್ವಾಮಿ.

ಇನ್‌ಸ್ಪೆಕ್ಟರ್

ರಂಗಪ್ಪ !

ಉಪಾಧ್ಯಾಯ

ಕಾಪಿಗೆ ಹೋಗಿದ್ದಾನೆ ಸ್ವಾಮಿ.

ಇನ್‌ಸ್ಪೆಕ್ಟರ್

ಹಳ್ಳೀಕಡೆ ಕಾಫಿ ಕುಡೀತಾರೇನ್ರೀ ?

ಉಪಾಧ್ಯಾಯ

ಈಗೇನು ಸ್ವಾಮಿ. ಹಳ್ಳ್ಯೋರೆಲ್ಲ ತಯಾರಾಗಿ ಹೋದರು. ಪೇಟೆಗೆ ದಿನಾಗಲೂ ಹೋಗುತ್ತಾರೆ. ಹೋಟಲು ಕಾಫಿ ಕುಡಿದು ಬರ್ತಾರೆ. ಮನೇಲೂ ಅಭ್ಯಾಸಮಾಡಿದ್ದಾರೆ.

ಇನ್‌ಸ್ಪೆಕ್ಟರ್

ಚೆನ್ನಾಯ್ತು. ಲಿಂಗಯ್ಯ !

ಉಪಾಧ್ಯಾಯ

ತಂಗಳೂಟಕ್ಕೆ ಹೋಗಿದ್ದಾನೆ ಸ್ವಾಮಿ !

ಇನ್‌ಸ್ಪೆಕ್ಟರ್

(ಕೋಪದಿಂದ) ಏನ್ರಿ, ಒಬ್ಬೊಬ್ಬರಿಗೆ ಒಂದೊಂದು ಹೇಳ್ತಿದ್ದೀರಿ. ಸುಳ್ಳು ಹಾಜರಿ ಗುರುತು ಮಾಡುತ್ತಾ ಇದ್ದೀರಾ ಏನು ?

ಉಪಾಧ್ಯಾಯ

ಇಲ್ಲ ಸ್ವಾಮಿ, ದೇವರಾಣೆಗೂ ಇಲ್ಲ ಸ್ವಾಮಿ. ತಂದೆ ತಾಯಿ ಬಂದು ಕರಕೊಂಡು ಹೋಗ್ತಾರೆ. ಬೇಡ ಅಂದ್ರೆ ಕೇಳೋದಿಲ್ಲ.

ಇನ್‌ಸ್ಪೆಕ್ಟರ್

ರಾಚಪ್ಪ !

ಉಪಾಧ್ಯಾಯ

ಬಂದಿದ್ದ ಸ್ವಾಮಿ. ಇಲ್ಲೇ ಎಲ್ಲೋ ನೀರಕಡೆ ಹೋಗಿರ ಬೇಕು.

( ಹುಡುಗರು ಸಣ್ಣ ಪುಟ್ಟ ಬಂದು ಸೇರುವರು )

ಇನ್‌ಸ್ಪೆಕ್ಟರ್

ಹಾಜರಿ ಎಲ್ಲ ಗುರುತಿಸಿ.

( ರಿಜಿಸ್ಟರ್ ಕೊಡುವರು. ಉಪಾಧ್ಯಾಯರು ಗುರುತಿಸುವರು )

(ಹುಡುಗರನ್ನೂ ಹಾಜರಿಯನ್ನೂ ತಾಳೆ ನೋಡಿ) ಏನ್ರೀ ! ರಿಜಿಸ್ಟರಿನಲ್ಲಿ ಹದಿನೈದು ಹಾಜರಿ ಇದೆ. ಇಲ್ಲಿ ಇಪ್ಪತ್ತೈದು ಮಕ್ಕಳು ಇದ್ದಾರಲ್ಲ !

ಉಪಾಧ್ಯಾಯ

ಅವರಿನ್ನೂ ದಾಖಲಾಗಿಲ್ಲ ಸ್ವಾಮಿ.

ಇನ್ಸ್ಪೆಕ್ಟರ್

ದಾಖಲಾಗದವರನ್ನು ಏಕೆ ಸೇರಿಸುತ್ತೀರಿ? ನಿಮಗೆ ಎಷ್ಟು ಬಾರಿ ಹೇಳುವುದು? ನಿಮ್ಮನ್ನು ಸಸ್ಪೆಂಡ್ ಏಕೆ ಮಾಡಕೂಡದು?

ಉಪಾಧ್ಯಾಯ

(ಭಯದಿಂದ) ಬೇಡಪ್ಪಾ ಬೇಡ, ಅಂತ ದಮ್ಮಯ್ಯಗುಡ್ಡೆ ಹಾಕಿದೆ ಸ್ವಾಮಿ. ಹೊಡಿಯೋದಕ್ಕೆ ಬರ್ತಾರೆ. ದೊಡ್ಡ ಹುಡುಗರನ್ನ ಸರಿಯಾಗಿ ಕಳಿಸೋದಿಲ್ಲ. ಸಣ್ಣ ಪುಟ್ಟ ತಂದು ಕೂಡಿಸುತ್ತಾರೆ. ವಾಯಿದೆ ಮೀರಿದ ಮೇಲೆ ಹುಡುಗರನ್ನ ತಂದು ಬಿಡ್ತಾರೆ. ಒರಟು ಜನ, ಹೇಳಿದ ಮಾತು ಕೇಳುವುದಿಲ್ಲ.

ಇನ್ಸ್ಪೆಕ್ಟರ್

ಅವರಿಗೆಲ್ಲ ರೂಲ್ಸು ತಿಳಿಸಬೇಕು, ತಿಳಿವಳಿಕೆ ಕೊಡಬೇಕು. ಈ ಹೆಚ್ಚು ಮಕ್ಕಳನ್ನೆಲ್ಲ ಕಳುಹಿಸಿಬಿಡಿ. ಅವರು ಬೇಡ.

( ಉಪಾಧ್ಯಾಯರು ಕಳುಹಿಸಿಬಿಡುವರು )

ಇನ್ಸ್ಪೆಕ್ಟರ್

ಎರಡನೆಯ ತರಗತಿಗೆ ಒಂದು ಲೆಕ್ಕ ಹಾಕಿ.

( ಊರವರು ಕೆಲವರು ಕಿಟಕಿ ಬಾಗಿಲುಗಳ ಹತ್ತಿರ ನಿಲ್ಲುವರು. ಕೆಲವರು ಒಳಗೆಲ್ಲ ಬಂದು ಕುಳಿತುಕೊಳ್ಳುವರು. )

ಇನ್ಸ್ಪೆಕ್ಟರ್

ಏನ್ರಿ ಮೇಷ್ಟ್ರೇ! ಅಷ್ಟು ದೊಡ್ಡ ಲೆಕ್ಕ ಹಾಕಿದ್ದೀರಿ. ಪಾಠಗಳ ಪಟ್ಟಿಯಲ್ಲಿ ಏನಿದೆ ಎನ್ನುವುದನ್ನು ನೋಡಿದ್ದೀರಾ?

## ಉಪಾಧ್ಯಾಯ

ನೋಡಿದ್ದೇನೆ ಸ್ವಾಮಿ. ಎಲ್ಲಾ ಲೆಕ್ಕಾನೂ ಮಾಡ್ತಾರೆ. ಕಷ್ಟಪಟ್ಟು ಹೇಳಿಕೊಟ್ಟಿದ್ದೇನೆ.

## ಇನ್ಸ್ಪೆಕ್ಟರ್

ಪಾಠದ ಪಟ್ಟೀಪ್ರಕಾರ ಮಾಡಬೇಕು. ಸಣ್ಣಲೆಕ್ಕ ಹಾಕಿ.

( ಬೇರೆ ಹುಡುಗರಿಗೆ ಗದ್ಯ ಓದುವಂತೆ ಹೇಳುವರು )

ಸರಿಯಾಗಿ ಓದು. ಧಾಟಿಯಾಗಿ ಓದಬೇಕು. ಏನ್ರೀ ಮೇಷ್ಟ್ರೇ! ಹುಡುಗರಿಗೆ ಸರಿಯಾಗಿ ಓದುವುದಕ್ಕೇ ಬರುವುದಿಲ್ಲ.

## ಉಪಾಧ್ಯಾಯರು

ಬರುತ್ತೆ ಸ್ವಾಮಿ. ಭಯಬಿದ್ದಿದ್ದಾರೆ. (ಹುಡುಗರಕಡೆ ತಿರುಗಿ) ಭಯಪಡಬೇಡಿ, ಭಯಪಡಬೇಡಿ. ಇನ್ಸ್ಪೆಕ್ಟರ್ ಸಾಹೇಬರು ಏನೂ ಮಾಡುವುದಿಲ್ಲ. ಓದಿ.

## ೧ನೇ ಗೌಡ

ಗಾಬರಾಗಬಿಟ್ಟವರೆ ಸ್ವಾಮಿ ಗಾಬರಾಗಬಿಟ್ವನ್ರೆ. ಲೇ ಹೆದರ ಬೇಡ ಮಗ, ಹೆದರಬೇಡ. ಯಾಕೋ ಮಗ ಅಳೋದು?

( ಹುಡುಗರು ಕೆಲವರು ಹೆದರಿಕೆಯಿಂದ ಅಳುತ್ತಾರೆ )

## ಇನ್ಸ್ಪೆಕ್ಟರ್

ಇವರನ್ನು ಆಟಕ್ಕೆ ಸ್ವಲ್ಪ ಬಿಡಿ. ದೊಡ್ಡ ಹುಡುಗರ ಪರೀಕ್ಷೆ ಮಾಡುತ್ತೇನೆ.

ನಮ್ಮ ಮಹಾರಾಜರ ಮೂಲಪುರುಷರು ಯಾರು ?
(ಉತ್ತರ ಇಲ್ಲ)
ತಿರುಚನಾಪಳ್ಳಿಗೆ ಹೋಗಿ ಜಟ್ಟಿಯನ್ನುಗೆದ್ದ ದೊರೆಯಾರು?
(ಉತ್ತರ ಇಲ್ಲ)
ಏನ್ರಿ ಮೇಷ್ಟ್ರೆ ? ಏನು ಹೇಳಿಕೊಟ್ಟಿದ್ದೀರಿ ?

## ಉಪಾಧ್ಯಾಯ

ಸ್ವಾಮಿ ಎಲ್ಲಾ ಹೇಳಿಕೊಟ್ಟಿದ್ದೆ. ಮೊನ್ನೆ ಒಂದು ತಿಂಗಳು ರಜಾ ತೆಗೆದುಕೊಂಡು ಹೋಗಿದ್ದೆ. ಬದಲಿ ಮಾಸ್ಟರು ಪಾಠಾನೇ ಮಾಡಲಿಲ್ಲ. ಹುಡುಗರೆಲ್ಲ ಮರೆತುಕೊಂಡುಬಿಟ್ಟಿದ್ದಾರೆ. ನಾನು ಎಂಟು ತಿಂಗಳು ಕಷ್ಟಪಟ್ಟಿದ್ದು ಒಂದು ತಿಂಗಳಲ್ಲಿ ವ್ಯರ್ಥ ಆಗಿ ಹೋಯಿತು. ಹಳ್ಳ್ಯೋರನ್ನ ಕೇಳಿ ಸ್ವಾಮಿ, ನನ್ನ ಕಷ್ಟ ಅವರಿಗೆ ಗೊತ್ತು.

## ೧ನೇ ಗೌಡ

ಹೌದು ಸ್ವಾಮಿ. ಬಹಳ ಕಷ್ಟಪಟ್ಟವ್ರೆ. ಬೆಳಗಾನ ಇಸ್ಕೂಲಿಗೆ ಬಂದ್ರೆ ಮನೆಗೇ ಹೋಗಾಕಿಲ್ಲ. ಬೈಗವರೆಗ ಮಕ್ಕಳ್ಗೆ ಪಾಟಾಹೇಳಿ ಚೆನ್ನಾಕ ತಯಾರು ಮಾಡಿದ್ರು.

## ೨ನೇ ಗೌಡ

ಇಲ್ಲೆ ಉಣ್ಣಕೊಂಡು ಇಲ್ಲೆ ಬಿದ್ದುಕೊಂಡಿರೋದೆ. ಯಾಕ್ ಸ್ವಾಮಿ ಮನೇಕೆ ಹೋಗಾಕಿಲ್ವಾ ಅಂದರೆ, ಮಕ್ಕಳ್ಗೆ ಪಾಟಾ ನಿಂತು ಹೋಗ್ತೈತೆ ಅಂತ ಇಲ್ಲೇ ಇರುತಿದ್ರು. ಬಲ್‌ಕಸ್ಟ ಬಿದ್ದವ್ರೆ ಸ್ವಾಮಿ. ತಮ್ಮ ಕಾಲದಾಗೆ ಮೇಸ್ಟ್ರುಗೆ ಎಲ್ಡು ರೂಪಾಯಿ ಪರ್ ಮೋಷನ್ ಕೊಡ್ಸಬೇಕು ಸ್ವಾಮಿ.

### ೩ನೇ ಗೌಡ

ಊರಾಕೆಲ್ಲ ಕಾಯಿಲೆ ಆಗೋಯ್ತು ಸ್ವಾಮಿ. ಮನೆ ಮನೆಕೂ ಮಾರಿ ಉಪದ್ರ ಜೋರು. ಇನ್ನೂ ಮಕ್ಳು ತೇರ್ಕೊಂಡೇ ಇಲ್ಲ. ಸುತ್ತ ಹಳ್ಳಿ ಕಾಯಿಲೆ. ಮಕ್ಳು ಬರೋದೆ ನಿಂತೋಯ್ತು. ಅಂಗೇ ಇಂಗೇ ಸ್ಕೂಲು ಬಾಕ್ಲು ಮುಚ್ಚದೇನೇ ಕಸ್ಟಪಟ್ಕೊಂಡು ನಡ್ಸಿಕೊಂಡು ಬಂದವ್ರೆ. ಬಲು ಕಸ್ಟ ಬಿದ್ದವ್ರೆ ಸ್ವಾಮಿ.

### ಇನ್‌ಸ್ಪೆಕ್ಟರ್

(ಮೇಷ್ಟ್ರನ್ನು ಕುರಿತು) ಏನ್ರಿ, ಪ್ರತಿ ತಿಂಗಳಲ್ಲೂ ಹಾಜರಿ ಚೆನ್ನಾಗಿದೆ. ಮೂವತ್ತು ಹುಡುಗರಿಗೆ ೨೦—೨೫ ಬರುತಾ ಇದ್ದಾರೆ.

### ೧ ನೇ ಗೌಡ

ಅಂಗೇನೆ ಬರ್ತಿದ್ರು ಸ್ವಾಮಿ. ಇಸ್ಕೊಲಂದ್ರೆ ಮಕ್ಕಳ್ಗೆ ಪಿರಾಣ. ಈ ಮೇಸ್ಟ್ರು ಕಂಡ್ರೆ ಇದ್ದದ್ದೂ ಪಿರಾಣ. ಒಂದು ಚಣ ಬಿಟ್ಟಿರೋಕಿಲ್ಲ. ಜೊರದಾಗು 'ಇಸ್ಕೋಲು ಇಸ್ಕೋಲು' ಅಂತ ಪಿರಾಣ ಬಿಡುತಿದ್ದೋ.

### ೨ನೇ ಗೌಡ

ಈ ವರ್ಸ ಎಂಗೋ ಸುದಾರಿಸಿ ಸ್ವಾಮಿ. ಮುಂದಲರ್ಸ ನೋಡಿ ನಿಮ್ಕೇನೆ ಚೋದ್ಯ ಆಗಬೇಕು. ಮೇಷ್ಟ್ರೂನೂವೆ ಬಲ್ ಕಸ್ಟ ಬಿದ್ದವ್ರೆ. ಪದ್ಯಗಿದ್ಯ ಹೇಳ್ಸಿ ಮೇಷ್ಟ್ರು ಬರ್ತೈತಲ್ಲ.

### ಹುಡುಗರು

ತಿರ್ಕನೊರ್ವ ನೂರಮುಂದೆ
ಮುರ್ಕು ದವ್ಸ್ತ ಸಾಲೆಯಲ್ಲಿ
ಒರಗಿರುತ್ತ ಅನ್ನಕನಸ ಕಂಡನೆಂತೆನೆ।

ಇನ್‌ಸ್ಪೆಕ್ಟರ್

ಸಾಕು ಮೇಷ್ಟ್ರೇ ಸಾಕು!

೩ನೇ ಗೌಡ

ನಿಮ್ ಕಾಲದಾಗೆ ಇಸ್ಕೋಲಗೊಂದು ಕಟ್ಟಡಾ ಮಾಡ್ಸಿ ಕೊಡಬೇಕು ಸ್ವಾಮಿ. ತಮ್ಮ ಎಸ್ರು ಉಳೀತೈತೆ.

ಇನ್‌ಸ್ಪೆಕ್ಟರ್

ಪಾಠಶಾಲೆ ಕೊಟ್ಟಾಗ ಕಟ್ಟಡ ನೀವೇ ಕೊಡ್ತೀವಿ ಅಂತ ಮುಚ್ಚಳಿಕೆ ಬರೆದುಕೊಟ್ಟಿದ್ದೀರಿ. ನಾಲ್ಕುವರ್ಷ ಆಗಿಹೋಯ್ತು. ಕಟ್ಟಡ ಮಾತ್ರ ಇಲ್ಲ.

೧ನೇ ಗೌಡ

ಬಡರೈತರು ಎಲ್ಲೋಗೋಣ ಸ್ವಾಮಿ. ಮಳೆಯಿಲ್ಲ ಬೆಳೆ ಯಿಲ್ಲ. ಚಾಮ ಕಿತ್ತುಕೊಂಡು ತಿಂತೈತೆ. ಸರ್ಕಾರದ ಕಟ್ಟಡ ಒಂದು ಮಾಡ್ಸಿಕೊಡಿ ಸ್ವಾಮಿ. ಹಿಂದಿನ ಇನ್‌ಚ್‌ಪೆಟ್ರು ಇಸ್ಕೋಲು ಕೊಟ್ಟರು. ತಮ್ಮ ಕಾಲದಾಗೆ ಕಟ್ಟಡ ಆಗೋದ್ರೆ ಚೆನ್ನಾಗಿರ್ತೈತೆ.

(ಈರಣ್ಣಗಾಡನ ಪ್ರವೇಶ)

ಇನ್‌ಸ್ಪೆಕ್ಟರ್

ನೀವು ಬರೆದುಕೊಟ್ಟ ಮುಚ್ಚಳಿಕೆ ಪ್ರಕಾರ ನೀವು ನಡೆಯ ಬೇಕು. ಸ್ಕೂಲು ಬೇಕು ಅನ್ನೋವಾಗ ಎಲ್ಲಾನು ಕೊಡುತ್ತೀವೆ ಅಂತ ಬರಕೊಡುತ್ತೀರಿ. ಕೆಲಸ ಆದಮೇಲೆ ನಾವು ಬಡವರು

ಸ್ವಾಮಿ ಸರ್ಕಾರಾನೆ ಮಾಡಲಿ ಅಂತೀರಿ. ಹಾಗೆಲ್ಲ ಮಾಡ ಬಾರದು.

ಈರಣ್ಣಗೌಡ

ಏನ್ ಸೋಮಿ ಬಲ್‌ಜೋರು ಮಾಡ್ತೀರಾ.

ಇನ್‌ಸ್ಪೆಕ್ಟರ್

ಯಾರಪ್ಪಾ ನೀನು ? ಹಾಗೆಲ್ಲಾ ಒರಟೊರಟಾಗಿ ಮಾತಾಡ ಬಾರದು.

೧ನೇಗೌಡ

ಚೋರ್‌ಮನ್ ಸ್ವಾಮಿ, ಚೋರ್‌ಮನ್, ಈರಣ್ಣಗೌಡ.

ಈರಣ್ಣಗೌಡ

ಕಂಡಿವ್ನಿ ಬಿಡಿ ಸೋಮಿ ಎಷ್ಟೋ ಇನ್‌ಚ್‌ಪೆಟ್ರಾನ. ಯಾರೂ ನಂಗೆ ನೋಟೀಸ್ ಕೊಟ್ಟಿಲ್ಲಾ. ಅಮುಲ್ದಾರ್ರು ಕೂಡ ನೋಟೀಸ್ ಕೊಡಾಕಿಲ್ಲಾ ಮರ್ವಾದೆಯಿಂದ ಹೇಳಿಕಳ್ಸತವ್ರೆ.

ಇನ್‌ಸ್ಪೆಕ್ಟರ್

ನಾವೇನು ನೋಟೀಸ್ ಕೊಟ್ಟದ್ದು ?

ಈರಣ್ಣಗೌಡ

ಹುಡುಗರ ಸಂಖೆ ಸಾಲದು, ಹುಡುಗರ ಹಾಜರಿ ಚೆನ್ನಾಗಿಲ್ಲ, ಇಸ್ಕೋಲಿಗೆ ಕಟ್ಟಡ ಕಟ್ಟಿಲ್ಲ, ಕಟ್ಟಿದಿದ್ದರೆ ಇಸ್ಕೋಲು ಬೇರೆ

ಹಳ್ಳಿಗೆ ವರ್ಗಾಮಾಡ್ತೀವೆ ಅಂತ ನೋಟೀಸ್‌ಮ್ಯಾಗೆ ನೋಟೀಸ್ ಕೊಟ್ಟವ್ರಿ.

### ಇನ್‌ಸ್ಪೆಕ್ಟರ್

ಪಂಚಾಯತಿಗೆ ತಿಳಿವಳಿಕೆ ಕೊಟ್ಟಿದ್ದೇವೆ. ಪಂಚಾಯತಿ ಸ್ಕೂಲು ವಿಚಾರದಲ್ಲಿ ಮುತುವರ್ಜಿ ವಹಿಸಬೇಕು. ನೀವೆಲ್ಲ ಸ್ಕೂಲು ಕಮಿಟಿ ಮೆಂಬರುಗಳು. ಪಂಚಾಯಿತಿ ಪರ ಚೇರ್ಮ ನ್ನರಿಗೆ ಬರೆಯುತ್ತೇವೆ.

### ಈರಣ್ಣಗೌಡ

ನಮ್ಮಮೇಲೆ ಏನಯ್ತಿ ನಿಮ್ಮಧಿಕಾರ ನೋಟೀಸ್ ಕೊಡಾಕೆ ? ನಾನೇನು ನಿಮ್ಮ ತಾಪೇದಾರ್ನ ? ನಂಗೇನು ಜುಲ್ಮಾನೆ ಹಾಕೀರ, ಡಿಸ್‌ಮಿಸ್ ಮಾಡೀರ ? ನಿಮ್ಮ ಮೇಸ್ಟ್ರುವ್ರೆ ತಾಕೀತು ಮಾಡಿ.

### ಇನ್‌ಸ್ಪೆಕ್ಟರ್

ಸರಿ ಹಾಗಾದರೆ.

### ೧ನೇ ಗೌಡ

ಈರಣ್ಣ ! ಅಂಗೆಲ್ಲ ಆಡಬೇಡ. ನಮ್ಮ ಒಳ್ಳೇದಕ್ಕೆ ಅವರು ಹೇಳ್ತವ್ರೆ.

### ಈರಣ್ಣಗೌಡ

ಸರಿ ಎಂತೋದು ಸೋಮಿ ಬೆಸಿ. ಆ ರಾಮಣ್ಣಗೌಡ, ತನ್ನೆಲ್ಡು ಮಕ್ಕಳ್ಗೆ ಪಾಟಾ ಹೇಳಿಕೊಡಾಕೆ ಒಂದಿಸ್ಕೋಲು

ಬೇಕೂಂತ ಅರ್ಜಿಹಾಕಿದ. ಕಟ್ಟಡ ಕೊಡ್ತೀವೆ ಎಂತ ಏನೇನೊ ಬರಕೊಟ್ಟ.

### ೨ನೇ ಗೌಡ

ಆ ಅರ್ಜಿಗೆ ನೀನೂ ರುಜು ಹಾಕಿಲ್ವಾ?

### ಈರಣ್ಣಗೌಡ

ಏನೋ ರುಜು ಹಾಕೂ ಅಂದ ಹಾಕಿವ್ನಿ. ರುಜು ಹಾಕಿದ್ರೆ ಸ್ಕೂಲು ಕಟ್ಟಡ ಕಟ್ಟಿಕೊಡಬೇಕಾ?

### ಇನ್‌ಸ್ಪೆಕ್ಟರ್

ಗ್ರಾಮಸ್ಥರು ಮನಸ್ಸು ಮಾಡಿದರೆ ಕಟ್ಟಡ ಆಗಿಹೋಗುತ್ತೆ.

### ಈರಣ್ಣಗೌಡ

ನಿಮ್ಮ ಇಸ್ಕೋಲೂ ಬ್ಯಾಡ ಎಂತದೂ ಬ್ಯಾಡ.

### ೨ನೇ ಗೌಡ

ಇಸ್ಕೋಲ್ಯಾಕೆ ಬ್ಯಾಡಲಾ? ನಾವೆಲ್ಲ ಅಷ್ಟು ಕಸ್ಟಪಟ್ಟು ಮಕ್ಕಳ್ಗೆ ಇದ್ಯೆ ಬರಲಿ ಅಂತ ಇಸ್ಕೋಲು ಮಾಡ್ಸಿಕೊಂಡ್ರೆ ಇಸ್ಕೋಲೇ ಬ್ಯಾಡ ಅಂತೀಯ.

### ಈರಣ್ಣಗೌಡ

ಆಳಿಸ್ಕೋಲು ಬಂದೊ ಗ್ರಾಮದಾಗೆ ಪಾರ್ಟಿ ಆಗೋಯ್ತು. ಆ ರಾಮಣ್ಣಗೌಡ ನಾ ಇಸ್ಕೋಲು ಮಾಡ್ಸಿದೆ, ನಂಕೇ ಓಟು ಕೊಡ್ರಲಾ ಅಂತ ವರ್ಸವರ್ಸನೂ ತಾನೇ ಚೇರ್ಮೆನ್, ತಾನೇ

ರಪ್ಪರ್‌ಜಂಟಿ ನೊಂಬರು. "ಇಸ್ಕೋಲು ಕೊಡ್ಸಿತೀನಿ, ರಸ್ತೆ ಮಾಡ್ಸಿತಿವ್ನಿ, ಕೆರೆ ಕಟ್ಸಿತಿವ್ನಿ, ಕಂದಾಯ ರಿಮಿಸನ್‌ಮಾಡ್ಸಿತಿವ್ನಿ" ಅಂತ ಹಳ್ಳ್ಯೋರತ್ರೆಲ್ಲ ಓಟು ವಸೂಲಿಮಾಡೋಕೆ ಎಲ್ಲಾ ಆಟಾನು ಕಟ್ತವ್ನೆ. ನಮ್ಕೆ ಇಸ್ಕೋಲೇ ಬೇಡ ಹೋಗು.

### ೩ನೇ ಗೌಡ

ಲೇ ಈರಣ್ಣ, ಬಾಯ್ಬೈತೆ ಅಂತ ಅಂಗೆ ನೀನು ದೂಸಣೆ ಮಾಡ್ತೀಯಾ ? ರಾಮಣ್ಣಗೌಡ ಬರಲೇಳು, ಕಾಣ್ತೈತ.

### ಈರಣ್ಣಗೌಡ

ನಂಗೇನು ರಾಮಣ್ಣಗೌಡ್ನ ಹೆದರಿಕೆ. ಗಲ್ಲಿಗಾಕ್ತಾನ ?

( ರಾಮಣ್ಣಗೌಡನ ಪ್ರವೇಶ. ಈರಣ್ಣಗೌಡ ಸುಮ್ಮನಾಗುವನು )

### ರಾಮಣ್ಣಗೌಡ

ನಮಸ್ಕಾರ ಸ್ವಾಮಿ, ನಾನು ಊರಲ್ಲಿರಲಿಲ್ಲ, ಈಗತಾನೆ ಬಂದೆ. ಯಾವಾಗ ಬಂತು ತಮ್ಮ ಸ್ವಾರಿ.

### ಇನ್‌ಸ್ಪೆಕ್ಟರ್

ಬೆಳಗ್ಗೆ ಇನ್‌ಸ್ಪೆಕ್‌ಷನ್ನಿಗೆ ಬಂದೆ. ನಿಮ್ಮ ಚೇರ್ಮನ್ನರಿಗೆ ಸ್ಕೂಲೇ ಬ್ಯಾಡವಂತೆ. ಇನ್ನು ಈ ಹಳ್ಳಿಗೆ ಬರೋ ಕಷ್ಟಾನೇ ತಪ್ಪಿತು.

### ರಾಮಣ್ಣಗೌಡ

ಯಾರು ಹೇಳಿದವರು, ಈರಣ್ಣನಾ ? ಈ ವರ್ಸ ಚೇರ್ಮನ್ ಆದ್ದಕ್ಕೆ ಪಿತ್ತ ತಲೇಗೇರ್ತಾ ?

**ಈರಣ್ಣಗೌಡ**

ನಿನ್ನಿಸ್ಕೋಲ್ ನೀನೆ ಮಡಕ್ಕೊ.

( ಹೊರಡುವುದರಲ್ಲಿರುವನು )

**೧ನೇ ಗೌಡ**

ಈರಣ್ಣ, ಅಂಗೆಲ್ಲ ಹೋಗ್ಬೇಡ ಬಾ. ಸ್ವಾಮೇರತಾವ ಇಸ್ಕೋಲ್ ಕಟ್ಟಡ ಇತ್ತರ್ಥ ಮಾಡೋಣ.

**ಈರಣ್ಣಗೌಡ**

ನಿಮ್ಮ ಪಾಳೇಗಾರ ಬಂದವ್ನಲ್ಲ. ನಂಗ್ಯಾಕಾ ಇನ್ ಮಾತು. ಗದ್ದೆ ಕಡೆಗೆ ಹೋತಿವ್ನಿ.

( ಹೊರಟುಹೋಗುವನು )

**ರಾಮಣ್ಣಗೌಡ**

ಸ್ವಾಮಿ, ಕಟ್ಟಡಕ್ಕೆ ಸಾಮಾನೆಲ್ಲ ಜಮಾಯಿಸಿದ್ದೇವೆ. ಈಗ ಕಣಗಾಲ. ರೈತರು ಕೆಲಸಕ್ಕೆ ಬರೋದಿಲ್ಲ. ಈ ವರ್ಷ ಎಂಗಾದರೂ ಕಟ್ಸಿಕೊಡ್ತೇನೆ, ಸ್ವಲ್ಪ ಸುಧಾರಿಸಿ. ಖಂಡಿತ ಈ ವರ್ಷ ನಿಲ್ಲಿಸೋದಿಲ್ಲ. ಮೇಷ್ಟ್ರೆ ! ಇನ್‌ಚ್‌ಪೆಟ್ರನ್ನ ಅಂಗೇ ಕಳಸಬೇಡ್ರಿ. ನಮ್ಮ ಹಳ್ಳಿಗೆ ಬಂದು ಅಂಗೇ ಹೋಗೋದು ಚೆನ್ನಾಗಿಲ್ಲ.

( ಉಪಾಧ್ಯಾಯರು ಹೋಗುವರು )

### ಇನ್‌ಸ್ಪೆಕ್ಟರ್

ಇಲ್ಲ ರಾಮಣ್ಣಗೌಡರೇ, ಹೊತ್ತಾಗಿ ಹೋಯ್ತು. ಅವೆಲ್ಲ ಏನೂ ಬೇಡ. ನಾನು ಹೋಗುತ್ತೇನೆ.

### ರಾಮಣ್ಣಗೌಡ

ಬೇಡ ಸ್ವಾಮಿ, ಮದ್ಯಾನ್ನ ಆಗೋಯ್ತು. ದಣಿಕೊಂಡು ಬಂದಿದ್ದೀರಿ ಅಳ್ಳೀಗೆ. ಎಲಾ, ಎಳನೀರು ತಾ ಹೋಗು, ಬೀನ ಬಾ. ಸ್ವಾಮಿ, ಮೇಷ್ಟ್ರು ಕಷ್ಟಪಟ್ಟು ಕೆಲಸ ಮಾಡ್ತಿದ್ದಾರೆ. ಅವರಿಗೇನಾದರೂ ಪರ್ಮೋಷನ್ ಕೊಡಿಸಿ ಸ್ವಾಮಿ.

### ಇನ್‌ಸ್ಪೆಕ್ಟರ್

ರಾಮಣ್ಣಗೌಡರೇ, ಈಗ ಸರ್ಕಾರದವರು ಮೇಷ್ಟ್ರು ಸಂಬಳ ಗಳನ್ನೆಲ್ಲ ಹೆಚ್ಚಿಸಿದ್ದಾರೆ. ಆರ್ಡರ್ ಬಂದಿದೆ. ಈ ಜುಲೈ ಲಾಗಾಯಿತು ಹೊಸ ಗ್ರೇಡುಗಳು ಜಾರಿಗೆ ಬರುತ್ತವೆ. ಸರ್ಕಾರ ದವರು ಲಕ್ಷ ರೂಪಾಯಿ ಹೆಚ್ಚಾಗಿ ಮುಂಜೂರುಮಾಡಿದ್ದಾರೆ.

### ರಾಮಣ್ಣಗೌಡ

ಬಹಳ ಸಂತೋಷ ಸ್ವಾಮಿ. ಮುಖ್ಯ ಪ್ರೈಮರಿ ಸ್ಕೂಲು ಉದ್ಧಾರ ಆಗಬೇಕು. ಮೇಷ್ಟರಿಗೆ ಚೆನ್ನಾಗಿ ಸಂಬಳ ಕೊಡ ಬೇಕು. ಅವರೂನೂವೆ ಚೆನ್ನಾಗಿ ಕೆಲಸಮಾಡ್ತಾ ಇದ್ದಾರೆ ಸ್ವಾಮಿ.

### ಇನ್‌ಸ್ಪೆಕ್ಟರ್

ಬರಿ ಮೇಷ್ಟರಿಂದ ಏನಾಗುತ್ತೆ ರಾಮಣ್ಣಗೌಡರೇ. ಗ್ರಾಮಸ್ಥರು ಮುತುವರ್ಜಿ ವಹಿಸಬೇಕು. ಪಂಚಾಯುತಿಯವರು

ಸರಿಯಾಗಿ ನೋಡಿಕೊಳ್ಳಬೇಕು. ನಿಮ್ಮ ಚೇರ್ಮನ್ನರಂಥವರು ಬಂದುಬಿಟ್ಟರೆ ನಾವೇನು ಮಾಡುವುದು ?

( ಉಪಾಧ್ಯಾಯರು ಕಾಫಿ ತರುವರು, ಎಳನೀರು ಬರುವುದು )

### ಮೇಷ್ಟ್ರು

ಸ್ವಾಮಿ, ರಾಮಣ್ಣಗೌಡರಿಂದಾನೇ ಈ ಹಳ್ಳಿ ಇಷ್ಟುಮಟ್ಟಿಗೆ ಇರೋದು. ನಮಗೆಲ್ಲ ಎಷ್ಟೋ ಸಹಾಯ ಮಾಡಿದ್ದಾರೆ. ಅವರಿಲ್ಲದಿದ್ದರೆ ಎರಡು ದಿವಸ ಇಲ್ಲಿ ಪೂರೈಸೋದು ಕಷ್ಟ ಸ್ವಾಮಿ.

### ಇನ್‌ಸ್ಪೆಕ್ಟರ್

ಮೇಷ್ಟ್ರೆ, ಮಕ್ಕಳನ್ನೆಲ್ಲ ಕರೆಯಿರಿ. ಹಾಡೇನಾದರೂ ಹೇಳಿ ಕೊಟ್ಟಿದ್ದೀರಾ, ಕೇಳೋಣ.

( ಹುಡುಗರು ಜಮಾಯಿಸುವರು. "ಕಾಯೌ ಶ್ರೀಗೌರಿ" ಹೇಳುವರು )



